KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

| ಸಂಪುಟ ೧೪೧ | ಬೆಂಗಳೂರು, ಗುರುವಾರ, ನವೆಂಬರ್ ೯, ೨೦೦೬ (ಕಾರ್ತಿಕ ೧೮, ಶಕ ವರ್ಷ ೧೯೨೮) | ಸಂಚಿಕೆ ೪೪ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಜೆ.ಅಶ್ವಥ್, ನಿವೃತ್ತ ಕೆಎಎಸ್ ಅಧಿಕಾರಿ ಇವರ ಮೇಲೆ ಇಲಾಖಾ ವಿಚಾರಣೆ-ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಕುರಿತಂತೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಕ್ರಮಾಂಕ:ಸಿಆಸುಇ 78 ಎಸ್ಇಎನ್ 2000 ದಿನಾಂಕ:18.10.2000.
2) ವಿಚಾರಣಾ ವರದಿ ಕ್ರಮಾಂಕ: ಲೋಕ್ / ಎಆರ್‌ವಿ-1 / ಇಎನ್‌ಕ್ಯೂ-97 /2002-03 ದಿನಾಂಕ: 21.10.2004.
3) ಲೋಕಾಯುಕ್ತರ ಪತ್ರ ಕ್ರಮಾಂಕ: ಲೋಕ್ / ಎಆರ್‌ವಿ-1 / ಇಎನ್‌ಕ್ಯೂ-97 /2002-03 ದಿನಾಂಕ: 14.02.2006.
4) ನೋಟೀಸ್ ಕ್ರಮಾಂಕ:ಸಿಆಸುಇ 78 ಎಸ್ಇಎನ್ 2000 ದಿನಾಂಕ:06.03.2006.
5) ಶ್ರೀ ಜೆ.ಅಶ್ವಥ್, ನಿವೃತ್ತ ಕೆಎಎಸ್ ಅಧಿಕಾರಿ ಅವರ ಉತ್ತರ ದಿನಾಂಕ:21.03.2006.
6) ಕಾರ್ಯದರ್ಶಿ, ಕರ್ನಾಟಕ ಲೋಕ ಸೇವಾ ಆಯೋಗ ಅವರ ಪತ್ರದ ಕ್ರಮಾಂಕ: ಪಿಎಸ್‌ಸಿ / 65/ ಸಿಎನ್‌ಎಸ್/2006 ದಿನಾಂಕ:29.07.2006.

**ಪ್ರಸ್ತಾವನೆ:-**

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯಲ್ಲಿ ಶ್ರೀ ಜೆ.ಅಶ್ವಥ್, ಕೆಎಎಸ್ ಅಧಿಕಾರಿ ಅವರು ವಿಶೇಷ ಭೂಸ್ವಾಧೀನಾಧಿಕಾರಿ ಹುದ್ದೆಯಲ್ಲಿ, ಶ್ರೀ ಕೆಂಚಯ್ಯ, ಪ್ರಥಮ ದರ್ಜೆ ಸಹಾಯಕರು ಅವರು ಪ್ರಥಮ ದರ್ಜೆ ಸಹಾಯಕರ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಪಿರ್ಯಾದುದಾರರಿಗೆ ಪಾವತಿಸಬೇಕಿದ್ದ ರೂ.7,09,004/-ಗಳ ಭೂಪರಿಹಾರ ಧನ ಪಾವತಿಸಲು ರೂ.1,50,000/-ಗಳ ಅಕ್ರಮ ಸಂಭಾವನೆಗಾಗಿ ಒತ್ತಾಯಿಸಿ ಅದರ ಸಂಬಂಧ ರೂ.25,000/-ಗಳನ್ನು ಕೇಳಿ ಅದನ್ನು ಪಡೆಯುತ್ತಿದ್ದಾಗ ಲೋಕಾಯುಕ್ತ ಪೊಲೀಸರು ಬೀಸಿದ ಬಲೆಗೆ ಶ್ರೀ ಕೆಂಚಯ್ಯ ಅವರು ಸಿಕ್ಕಿಬಿದ್ದಿದ್ದರ ಆರೋಪಕ್ಕಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 14-ಎ ರನ್ವಯ ಶ್ರೀ ಜೆ.ಅಶ್ವಥ್ ಮತ್ತು ಶ್ರೀ ಕೆಂಚಯ್ಯ ಅವರುಗಳ ವಿರುದ್ಧ ಮಾಡಲಾಗಿದ್ದ ಆರೋಪದ ಬಗ್ಗೆ ಪೂರ್ಣ ಪ್ರಮಾಣದ ಜಂಟಿ ಇಲಾಖಾ ವಿಚಾರಣೆಯನ್ನು ಉಪ ಲೋಕಾಯುಕ್ತರ ಮೂಲಕ ನಡೆಸಲು ಮೇಲೆ (1)ರಲ್ಲಿ ಓದಲಾದ ಆದೇಶ ಹೊರಡಿಸಲಾಯಿತು. ಅವರಿಂದ ವಿಚಾರಣಾಧಿಕಾರಿಯಾಗಿ ನೇಮಕಗೊಂಡ ಅಡಿಷನಲ್ ರಿಜಿಸ್ಟ್ರಾರ್ ವಿಚಾರಣೆಗಳು-1 ಅವರು ವಿಚಾರಣೆ ನಡೆಸಿ ಮೇಲೆ (2)ರಲ್ಲಿ ಓದಲಾದ ದಿ:21.10.04ರ ವಿಚಾರಣಾ ವರದಿಯನ್ನು ಲೋಕಾಯುಕ್ತರಿಗೆ ಸಲ್ಲಿಸಿ ಆರೋಪ ಕುರಿತು ಈ ಕೆಳಕಂಡಂತೆ ನಿರ್ಣಯ ನೀಡಿದರು.

ಶ್ರೀ ಜೆ.ಅಶ್ವಥ್, ನಿವೃತ್ತ ಕೆಎಎಸ್ ಅಧಿಕಾರಿ ಅವರು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯಲ್ಲಿ ವಿಶೇಷ ಭೂಸ್ವಾಧೀನಾಧಿಕಾರಿಯಾಗಿ, ಶ್ರೀ ಕೆಂಚಯ್ಯ ಅವರು ಪ್ರಥಮ ದರ್ಜೆ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಗೆ ಭೂಸ್ವಾಧೀನವಾದ ಬೆಂಗಳೂರು ದಕ್ಷಿಣ ತಾಲ್ಲೂಕಿನ ಜಿಗಣಿ ಗ್ರಾಮದ ಸ.ನಂ.೨೦೮ರಲ್ಲಿನ ೨ ಎಕರೆ ಜಮೀನಿನ ಭೂಪರಿಹಾರ ಹಣವಾದ ರೂ.೭,೯೯,೦೦೪/-ಗಳ ಚೆಕ್ಕನ್ನು ಪಾವತಿಸಲು ರೂ.೧,೫೦,೦೦೦/-ಗಳ ಅಕ್ರಮ ಸಂಭಾವನೆಗಾಗಿ ಒತ್ತಾಯಿಸಿ ಅದರ ಸಂಬಂಧ ರೂ.೨೫,೦೦೦/-ಗಳನ್ನು ಪಿರ್ಯಾದುದಾರರಾದ ಶ್ರೀ ಮುನಿಸ್ವಾಮಿ ಅವರಿಂದ ಶ್ರೀ ಕೆಂಚಯ್ಯ ಅವರು ಪಡೆಯುತ್ತಿದ್ದಾಗ ಕರ್ನಾಟಕ ಲೋಕಾಯುಕ್ತ ಪೋಲೀಸರು ಬೀಸಿದ ಬಲೆಗೆ ದಿ:೧೩.೦೪.೯೪ರಂದು ಸಿಕ್ಕಿಬಿದ್ದಿರುವ ಆರೋಪ ಸಾಬೀತಾಗಿದೆಯೆಂಬ ನಿರ್ಣಯ ನೀಡಿದ್ದಾರೆ. ಅದೇ ರೀತಿ ಶ್ರೀ ಜೆ.ಅಶ್ವಥ್, ನಿವೃತ್ತ ಕೆಎಎಸ್ ಅಧಿಕಾರಿ ಅವರು ಮೇಲ್ಕಂಡ ಜಮೀನಿನ ಭೂಸ್ವಾಧೀನದ ಸಂಬಂಧ ಭೂಪರಿಹಾರ ಹಣವನ್ನು ಚೆಕ್ ಮೂಲಕ ದಿ:೦೪.೦೪.೯೪ರಂದು ನೀಡಿ, ಚೆಕ್ ಮೂಲಕ ನೀಡಿರುವ ಈ ಹಣವನ್ನು ಕೆಲವು ಕಾರಣಗಳಿಗಾಗಿ stop payment ಮಾಡುವಂತೆ ಬ್ಯಾಂಕ್ ಮ್ಯಾನೇಜರ್‌ಗೆ ತಿಳಿಸಿ ನಂತರ ಎಲ್ಲಾ ದಾಖಲಾತಿಗಳು ಸರಿ ಇರುವುದಾಗಿ ದೃಢಪಟ್ಟಿರುವುದರಿಂದ ಚೆಕ್ಕನ್ನು ತಡೆಹಿಡಿಯದೆ ಮಂಜೂರು ಮಾಡುವಂತೆ ಪತ್ರ ಬರೆದಿರುವುದನ್ನು ಗಮನಿಸಿದಲ್ಲಿ ಇವರೂ ಸಹ ಈ ಲಂಚ ಪ್ರಕರಣದಲ್ಲಿ ಭಾಗಿಯಾಗಿರುವುದು ಕಂಡು ಬಂದಿದೆಯೆಂದು ತಿಳಿಸಿ, ಇವರ ವಿರುದ್ಧ ಮಾಡಲಾದ ಆರೋಪವೂ ಸಹ ರುಜುವಾತಾಗಿದೆಯೆಂದು ತಿಳಿಸಿರುತ್ತಾರೆ.

ವಿಚಾರಣಾ ವರದಿಯನ್ನು ಪರಾಮರ್ಶಿಸಿದ ಲೋಕಾಯುಕ್ತರವರು ಮೇಲೆ (೩)ರಲ್ಲಿ ಓದಲಾದ ದಿ:೧೪.೦೨.೦೬ರಂದು ಶ್ರೀ ಕೆಂಚಯ್ಯ, ಪ್ರಥಮ ದರ್ಜೆ ಸಹಾಯಕರು ಅವರು ಲಂಚ ಪಡೆಯುತ್ತಿದ್ದಾಗ ಸಿಕ್ಕಿಬಿದ್ದಿರುವ ಆರೋಪದ ದುರ್ನಡತೆಯ ಪ್ರಮಾಣಕ್ಕನುಗುಣವಾಗಿ ಅವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ೧೯೫೭ರ ನಿಯಮ ೮(viii) ರನ್ವಯ ಸೇವೆಯಿಂದ ವಜಾಗೊಳಿಸುವ ಹಾಗೂ ಶ್ರೀ ಜೆ.ಅಶ್ವಥ್, ನಿವೃತ್ತ ಕೆಎಎಸ್ ಅಧಿಕಾರಿ ಅವರು ಎಸಗಿರುವ ದುರ್ನಡತೆಯ ಪ್ರಮಾಣಕ್ಕನುಗುಣವಾಗಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ ೨೧೪(೧)(ಎ)ರನ್ವಯ ಅವರ ನಿವೃತ್ತಿ ವೇತನದ ಶೇಕಡ ೩೫ರಷ್ಟನ್ನು ಶಾಶ್ವತವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸುವ ಶಿಫಾರಸ್ಸಿನೊಡನೆ ವಿಚಾರಣಾ ವರದಿ ಹಾಗೂ ದಾಖಲೆಗಳನ್ನು ಸರ್ಕಾರಕ್ಕೆ ರವಾನಿಸಿರುತ್ತಾರೆ.

ಈ ಪ್ರಕರಣದ ಮೊದಲನೇ ಆರೋಪಿತರಾದ ಶ್ರೀ ಕೆಂಚಯ್ಯ, ಪ್ರಥಮ ದರ್ಜೆ ಸಹಾಯಕರು ಅವರ Appointing Authority/Disciplinary Authority ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯಾಗಿರುವುದರಿಂದ ಅವರಿಗೆ ಸಂಬಂಧಿಸಿದಂತೆ ವಿಚಾರಣಾ ವರದಿ ಹಾಗೂ ಲೋಕಾಯುಕ್ತರ ಶಿಫಾರಸ್ಸಿನನ್ವಯ ಮುಂದಿನ ಕ್ರಮ ಕೈಗೊಳ್ಳಲು ವಿಚಾರಣಾ ವರದಿ ಹಾಗೂ ಲೋಕಾಯುಕ್ತರ ಶಿಫಾರಸ್ಸಿನ ಪ್ರತಿಯನ್ನು ಆಡಳಿತ ಇಲಾಖೆಯಾದ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಗೆ ಕಳುಹಿಸಿ ಕೊಡಲಾಯಿತು. ಅಲ್ಲಿ ಅವರಿಗೆ ಸಂಬಂಧಿಸಿದಂತೆ ಕ್ರಮ ಕೈಗೊಳ್ಳಲಾಗಿರುತ್ತದೆ. ಶ್ರೀ ಜೆ.ಅಶ್ವಥ್, ನಿವೃತ್ತ ಕೆಎಎಸ್ ಅಧಿಕಾರಿ ಅವರಿಗೆ ಸಂಬಂಧಿಸಿದಂತೆ ವಿಚಾರಣಾ ವರದಿ ಹಾಗೂ ಲೋಕಾಯುಕ್ತರ ಶಿಫಾರಸ್ಸನ್ನು ಮೇಲೆ (೪)ರಲ್ಲಿ ಓದಲಾದ ದಿ:೦೬.೦೩.೦೬ರ ನೋಟೀಸಿನೊಡನೆ ಅವರಿಗೆ ಒದಗಿಸಿ ಅವುಗಳ ಬಗ್ಗೆ ಏನಾದರೂ ಅಹವಾಲು ಇದ್ದಲ್ಲಿ ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು.

ಶ್ರೀ ಜೆ.ಅಶ್ವಥ್, ನಿವೃತ್ತ ಕೆಎಎಸ್ ಅಧಿಕಾರಿ ಅವರು ನೋಟೀಸಿಗೆ ಮೇಲೆ (೫)ರಲ್ಲಿ ಓದಲಾದ ದಿ:೨೧.೦೩.೦೬ರ ಉತ್ತರ ಸಲ್ಲಿಸಿ, ಬೆಂಗಳೂರು ದಕ್ಷಿಣ ತಾಲ್ಲೂಕು ಜಿಗಣಿ ಗ್ರಾಮದ ಸರ್ವೆ ನಂ.೨೦೮ರಲ್ಲಿನ ೨ ಎಕರೆ ಜಮೀನನ್ನು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯು ಭೂಸ್ವಾಧೀನ ಪಡಿಸಿಕೊಂಡಿದ್ದರ ಸಂಬಂಧ ಭೂ ಪರಿಹಾರ ಹಣವಾದ ರೂ.೭,೯೯,೦೦೪/-ಗಳ ಚೆಕ್ಕನ್ನು ಸದರಿ ಜಮೀನಿನ ಮಾಲೀಕರಾದ (ಪಿರ್ಯಾದುದಾರರಾದ) ಶ್ರೀ ಹೆಚ್.ಎಸ್.ಮುನಿಸ್ವಾಮಿ ಅವರಿಗೆ ಮಂಡಳಿಯ ಗುಮಾಸ್ತರಾದ ಶ್ರೀ ಕೆಂಚಯ್ಯ ಅವರು ನೀಡಿರುತ್ತಾರೆ. ಈ ೭,೯೯,೦೦೪/-ಗಳ ಚೆಕ್ಕನ್ನು ಫಿರ್ಯಾದುದಾರರಿಗೆ ನೀಡಲು ಶ್ರೀ ಕೆಂಚಯ್ಯರವರು ರೂ.೧,೫೦,೦೦/-ಗಳನ್ನು ಒತ್ತಾಯಿಸಿ ಅದರ ಪೈಕಿ ರೂ.೨೫,೦೦೦/-ಗಳನ್ನು ಪಡೆಯುತ್ತಿದ್ದಾಗ ಲೋಕಾಯುಕ್ತ ಪೋಲೀಸರಿಗೆ ಸಿಕ್ಕಿಬಿದ್ದಿರುತ್ತಾರೆ. ಲಂಚಕ್ಕಾಗಿ ಒತ್ತಾಯಿಸಿರುವುದು, ಅದನ್ನು ಪಡೆಯುವುದು ಇದ್ಯಾವುದೂ ಸಹ ತಮ್ಮ ಗಮನಕ್ಕೆ ಬಂದಿರುವುದಿಲ್ಲ. ಮಂಡಳಿಯಿಂದ ಕೊಡಲ್ಪಟ್ಟ ಈ ಚೆಕ್ಕು ಬ್ಯಾಂಕಿನಲ್ಲಿ ಕ್ಯಾಶ್ ಆಗದೆ ಇದ್ದುದರ ಪ್ರಯುಕ್ತ ಶ್ರೀ ಕೆಂಚಯ್ಯರವರನ್ನು ಪಿರ್ಯಾದುದಾರರಾದ ಶ್ರೀ ಹೆಚ್.ಎನ್.ಮುನಿಸ್ವಾಮಿಯವರು ಭೇಟಿ ಮಾಡಿ ವಿಚಾರಿಸಿರುತ್ತಾರೆ. ಅವರು ತಮಗೆ ಕೊಡಬೇಕಾದ ೧,೨೫,೦೦೦/-ಗಳನ್ನು ಕೊಡದೇ ಇದ್ದುದರಿಂದ ನಿಮ್ಮ ಚೆಕ್ಕಿಗೆ stop payment ಮಾಡಿದ್ದೇನೆಂದು ತಿಳಿಸಿರುತ್ತಾರೆ. ಅದೂ ಅಲ್ಲದೆ ನನ್ನ ಹೆಸರಿನಲ್ಲಿ ಕಾರ್ಪೋರೇಷನ್ ಬ್ಯಾಂಕ್ ಮ್ಯಾನೇಜರ್‌ರವರಿಗೆ payment ಮಾಡದಂತೆ ಪತ್ರವನ್ನು ಬರೆದಿರುತ್ತಾರೆ. ಇದೆಲ್ಲವನ್ನು ಶ್ರೀ ಕೆಂಚಯ್ಯ ಅವರೇ ಮಾಡಿರುತ್ತಾರೆಂದು ತಿಳಿಸಿ ಈ ರೀತಿ ಅವರು ಕೇಳಿದ ಮೊತ್ತವನ್ನು ಪಿರ್ಯಾದುದಾರರು ಶ್ರೀ ಕೆಂಚಯ್ಯ ಅವರಿಗೆ ಕೊಡಲು ಇಷ್ಟ ಪಡದೆ ಲೋಕಾಯುಕ್ತ ಕಛೇರಿಗೆ ಹೋಗಿ ದೂರು ಕೊಟ್ಟಿರುತ್ತಾರೆ. ದಿನಾಂಕ ೦೪.೦೪.೯೪ರಂದು ಚೆಕ್ಕನ್ನು ಕೊಡಲಾಗಿದ್ದು ಅದು ೦೯.೦೪.೯೪ರಂದು ಕ್ಯಾಶ್ ಆಗಿರುತ್ತದೆ. ಲೋಕಾಯುಕ್ತ ಕಛೇರಿಗೆ ಪಿರ್ಯಾದುದಾರರು ದಿನಾಂಕ ೧೩.೦೪.೯೪ರಂದು ದೂರು ನೀಡಿರುತ್ತಾರೆ. ಫಿರ್ಯಾದುದಾರರು ತಮ್ಮ ಕೆಲಸವಾದ ಮೇಲೆ ಅಂದರೆ ದಿನಾಂಕ ೧೩.೦೪.೯೪ರಂದು ದೂರು ನೀಡಿರುತ್ತಾರೆ. ಈ ದೂರನ್ನು ನೀಡಿರುವ ಸಂದರ್ಭದಲ್ಲಿ ಪಿರ್ಯಾದುದಾರರ ಯಾವುದೇ ಕೆಲಸ ತಮ್ಮ ಕಛೇರಿಯಲ್ಲಿ ಬಾಕಿ ಇದ್ದಿರಲಿಲ್ಲವೆಂದು ತಿಳಿಸಿ ಸನ್ಮಾನ್ಯ ಲೋಕಾಯುಕ್ತರು

ನೀಡಿರುವ ಶಿಫಾರಸ್ಸು/ದಂಡನೆಯು ಅವರ ವ್ಯಾಪ್ತಿಯಲ್ಲಿ ಬರುವುದಿಲ್ಲವೆಂದು ತಿಳಿಸಿರುತ್ತಾರೆ. ವಿಚಾರಣಾ ವರದಿಯು ಒಂದು ಪೂರ್ವಗ್ರಹ ಪೀಡಿತವಾಗಿದ್ದು, ಅದೊಂದು ಕಾಲ್ಪನಿಕ ಹಾಗೂ ಸಂಶಯದಿಂದ ಕೂಡಿದ ವರದಿಯಾಗಿರುವುದರಿಂದ ಈ ವಿಚಾರಣಾ ವರದಿ ಹಾಗೂ ಲೋಕಾಯುಕ್ತರ ಶಿಫಾರಸ್ಸನ್ನು ಒಪ್ಪದೇ ಅದನ್ನು ತಿರಸ್ಕರಿಸಿ ತಮಗೆ ಸಲ್ಲಬೇಕಾದ ನಿವೃತ್ತಿ ಸೌಲಭ್ಯಗಳನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಆರೋಪಿತ ನಿವೃತ್ತ ಕೆಎಎಸ್ ಅಧಿಕಾರಿಯಾದ ಶ್ರೀ ಜೆ.ಅಶ್ವಥ್ ಅವರ ಉತ್ತರವನ್ನು ದಾಖಲೆಗಳೊಡನೆ ಪರಿಶೀಲಿಸಲಾಗಿದೆ. ಬೆಂಗಳೂರು ದಕ್ಷಿಣ ತಾಲ್ಲೂಕು ಜಿಗಣಿ ಗ್ರಾಮದ ಸ.ನಂ.20ರಲ್ಲಿರುವ 2 ಎಕರೆ ಜಮೀನು ಶ್ರೀ ಹೆಚ್.ಎನ್. ಮುನಿಸ್ವಾಮಿಯವರಿಗೆ ಸೇರಿದ್ದು, ಈ ಜಮೀನನ್ನು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಗೆ ಬೇಕಾಗಿದ್ದರಿಂದ ಸರ್ಕಾರವು ಅದನ್ನು ಸ್ವಾಧೀನ ಪಡಿಸಿಕೊಂಡಿದ್ದರ ಸಂಬಂಧ ಭೂಪರಿಹಾರ ಹಣವಾದ ರೂ.7,09,004/-ಗಳನ್ನು ಚೆಕ್ ಮೂಲಕ ದಿ:04.04.94ರಂದು ಪಿರ್ಯಾದುದಾರರಾದ ಶ್ರೀ ಹೆಚ್.ಎನ್. ಮುನಿಸ್ವಾಮಿಯವರಿಗೆ ಮಂಡಳಿಯ ನೌಕರರಾದ ಶ್ರೀ ಕೆಂಚಯ್ಯ ಅವರು ವಿಶೇಷ ಭೂಸ್ವಾಧೀನಾಧಿಕಾರಿಯವರ ಕಛೇರಿಯಿಂದ ನೀಡಿರುತ್ತಾರೆ. ನಂತರ ಕಾರ್ಪೋರೇಷನ್ ಬ್ಯಾಂಕ್ ಮ್ಯಾನೇಜರ್ ರವರಿಗೆ ದೂರವಾಣಿ ಮುಖಾಂತರ ಪೇಮೆಂಟ್ ಮಾಡದಂತೆ ಅವರೇ ತಿಳಿಸಿರುವುದು ಕಂಡು ಬರುತ್ತದೆ. ದಿ:08.04.94ರಂದು ಎಲ್ಲಾ ದಾಖಲೆಗಳು ಸರಿ ಇರುವುದಾಗಿ ದೃಢಪಟ್ಟಿರುವುದರಿಂದ ಚೆಕ್ಕನ್ನು ತಡೆಹಿಡಿಯದೇ ಪಾಸ್ ಮಾಡುವಂತೆ ಅವರ ಕಛೇರಿಯಿಂದಲೇ ವಿಶೇಷ ಭೂಸ್ವಾಧೀನಾಧಿಕಾರಿಯವರಿಂದ ಪತ್ರ ಬರೆಸಿರುವುದನ್ನು ಸಹ ಗಮನಿಸಲಾಗಿದೆ. ದಿ:09.04.94ರಂದು ಚೆಕ್ ಕ್ಯಾಶ್ ಆಗಿರುತ್ತದೆ. ದಿ:13.04.94ರಂದು ಪಿರ್ಯಾದುದಾರರು ಲೋಕಾಯುಕ್ತ ಕಛೇರಿಯಲ್ಲಿ ದೂರನ್ನು ಈ ಕುರಿತಂತೆ ಸಲ್ಲಿಸಿರುತ್ತಾರೆ. ಅದರನ್ವಯ ಶ್ರೀ ಕೆಂಚಯ್ಯ ಅವರನ್ನು ಕರ್ನಾಟಕ ಲೋಕಾಯುಕ್ತ ಪೋಲೀಸರು ದಿ:13.04.94ರಂದು ಟ್ರ್ಯಾಪ್ ಮಾಡಿರುತ್ತಾರೆ. ಅಂದರೆ ದೂರು ನೀಡುವುದಕ್ಕಿಂತ ಮುಂಚೆ ಕೆಲಸವಾಗಿರುವುದನ್ನು ಗಮನಿಸಬಹುದಾಗಿರುತ್ತದೆ. ಹಾಗೂ ಶ್ರೀ ಜೆ.ಅಶ್ವಥ್ ಅವರು ನೇರವಾಗಿ ಲಂಚವನ್ನು ಪಡೆಯುವಾಗ ಸಿಕ್ಕಿಬಿದ್ದಿರುವುದಿಲ್ಲ. ಮತ್ತು ಅವರು ಲಂಚಕ್ಕಾಗಿ ಪಿರ್ಯಾದುದಾರರೊಂದಿಗೆ ಸಂಭಾಷಣೆ ನಡೆಸಿದ್ದಾರೆಯೇ ಇಲ್ಲವೇ ಎಂಬ ಬಗ್ಗೆ ಸ್ಪಷ್ಟವಾಗಿ ಗೋಚರಿಸುವುದಿಲ್ಲ. ಆದಾಗ್ಯೂ ಅವರು ಭೂಸ್ವಾಧೀನದ ಸಂಬಂಧ ಭೂಪರಿಹಾರ ಹಣವನ್ನು ಚೆಕ್ ಮೂಲಕ ನೀಡಿ, ಸದರಿ ಚೆಕ್ಕನ್ನು ಸ್ಟಾಪ್ ಪೇಮೆಂಟ್ ಮಾಡುವಂತೆ ಬ್ಯಾಂಕ್ ಮ್ಯಾನೇಜರ್‌ರವರಿಗೆ ತಿಳಿಸಿ ನಂತರ ಪೇಮೆಂಟ್ ಮಾಡುವಂತೆ ಪತ್ರ ಬರೆದಿರುವುದನ್ನು ಗಮನಿಸಲಾಗಿದೆ. ಹೀಗಾಗಿ ಸನ್ಮಾನ್ಯ ಲೋಕಾಯುಕ್ತರವರು ಅವರ ಈ ಮೇಲಿನ ದುರ್ನಡತೆಯ ಪ್ರಮಾಣಕ್ಕನುಗುಣವಾಗಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214(1)(ಎ)ರನ್ವಯ ಅವರ ನಿವೃತ್ತಿ ವೇತನದ ಶೇಕಡ 35ರಷ್ಟನ್ನು ಶಾಶ್ವತವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸುವಂತೆ ಶಿಫಾರಸ್ಸು ಮಾಡಿ ಈ ದಂಡನೆಯ ಪ್ರಮಾಣವು ನೇಮಕಾತಿ ಪ್ರಾಧಿಕಾರಿಯ ವಿವೇಚನೆಗೆ ಬಿಟ್ಟ ವಿಷಯವೆಂದು ತಿಳಿಸಿರುವುದನ್ನು ಪರಿಶೀಲಿಸಲಾಗಿದೆ. ಶ್ರೀ ಜೆ.ಅಶ್ವಥ್ ಅವರು ನೇರವಾಗಿ ಲಂಚವನ್ನು ಪಡೆಯುವಾಗ ಸಿಕ್ಕಿಬಿದ್ದಿರುವುದಿಲ್ಲ. ಭೂಪರಿಹಾರ ಚೆಕ್ಕನ್ನು stop payment ಮಾಡುವಂತೆ ನಂತರ payment ಮಾಡಿ ಎಂದು ಬ್ಯಾಂಕ್ ಮ್ಯಾನೇಜರ್‌ಗೆ ತಿಳಿಸಿರುವುದರಲ್ಲಿ ಆರೋಪಿತರ ವರ್ತನೆಯಲ್ಲಿ ಸ್ವಲ್ಪ ಮಟ್ಟಿಗೆ ಸಂಶಯ ಮೂಡುತ್ತದೆ. ಹೀಗಾಗಿ ಅವರ ಉತ್ತರವನ್ನು ಒಪ್ಪಲು ಸಾಧ್ಯವಿಲ್ಲ. ಆದುದರಿಂದ ಅವರ ಉತ್ತರವನ್ನು ಒಪ್ಪದೇ ವಿಚಾರಣಾಧಿಕಾರಿ ಹಾಗೂ ಲೋಕಾಯುಕ್ತರ ಶಿಫಾರಸ್ಸನ್ನು ಒಪ್ಪಿ ಅವರ ಮೇಲಿನ ಆರೋಪದ ತೀವ್ರತೆಗನುಗುಣವಾಗಿ ಅವರ ನಿವೃತ್ತಿ ವೇತನದ ಶೇಕಡ 35ರಷ್ಟನ್ನು ಶಾಶ್ವತವಾಗಿ ತಡೆಹಿಡಿಯುವ ದಂಡನೆಯು ತುಂಬಾ ಕಠಿಣ ದಂಡನೆಯೆಂದು ಸರ್ಕಾರವು ಭಾವಿಸಿ ಅದರ ಬದಲಾಗಿ ಅವರ ನಿವೃತ್ತಿ ವೇತನದ ಶೇಕಡ 25ರಷ್ಟನ್ನು ಶಾಶ್ವತವಾಗಿ ತಡೆಹಿಡಿಯುವ ದಂಡನೆ ವಿಧಿಸಲು ಸರ್ಕಾರವು ತೀರ್ಮಾನಿಸಿ ಈ ಪ್ರಸ್ತಾವನೆಗೆ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಮೇಲೆ (6)ರಲ್ಲಿ ಓದಲಾದ ದಿ:29.07.06ರಂದು ಪಡೆಯಲಾಗಿದೆ. ಕರ್ನಾಟಕ ಲೋಕ ಸೇವಾ ಆಯೋಗವು ನೀಡಿರುವ ಸಹಮತಿಯನ್ವಯ ದಂಡನೆ ವಿಧಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 78 ಎಸ್‌ಇಎನ್ 2000 ಬೆಂಗಳೂರು ದಿನಾಂಕ:14ನೇ ಸೆಪ್ಟೆಂಬರ್ 2006.**

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 214ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಜೆ.ಅಶ್ವಥ್, ನಿವೃತ್ತ ಕೆಎಎಸ್ ಅಧಿಕಾರಿ ಅವರ ಮಾಸಿಕ ವಿಶ್ರಾಂತಿ ವೇತನದ ಶೇಕಡ 25ರಷ್ಟು ಮೊತ್ತವನ್ನು ಶಾಶ್ವತವಾಗಿ ಕಡಿತಗೊಳಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಘುರಾಮ್ ಭಂಡಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

ಪಿ.ಆರ್. 1405

**ವಿಷಯ:** ಶ್ರೀ ಬಿ.ರಂಗಸ್ವಾಮಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ ೬೮ ಎಸ್‌ಇಎನ್ ೯೬ ದಿನಾಂಕ:೦೨.೦೮.೨೦೦೪.
2) ಶ್ರೀ ಬಿ.ರಂಗಸ್ವಾಮಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರ ವರದಿ ದಿನಾಂಕ: ೨೬.೦೮.೨೦೦೬.

**ಪ್ರಸ್ತಾವನೆ:-**

ಶ್ರೀ ಎಂ.ರಾಜಶೇಖರಯ್ಯ, ನಿವೃತ್ತ ಮುಖ್ಯ ಇಂಜಿನಿಯರ್ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ(1) ರಲ್ಲಿ ಓದಲಾದ ದಿನಾಂಕ:02.08.04ರ ಸರ್ಕಾರಿ ಆದೇಶದಲ್ಲಿ ಶ್ರೀ ಬಿ.ರಂಗಸ್ವಾಮಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ(2) ರಲ್ಲಿ ಓದಲಾದ ದಿನಾಂಕ:26.08.06ರ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಈ ಸಂಬಂಧ ಅವರಿಗೆ ಗೌರವಧನ ಹಾಗೂ ವಾಹನಭತ್ಯೆ ಮಂಜೂರು ಮಾಡಲು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ ೬೮ ಎಸ್‌ಇಎನ್ ೯೬(ಭಾ) ಬೆಂಗಳೂರು ದಿನಾಂಕ:೧೯ನೇ ಸೆಪ್ಟೆಂಬರ್ ೨೦೦೬.**

ಸರ್ಕಾರವು ಶ್ರೀ ಬಿ.ರಂಗಸ್ವಾಮಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರು ವಿಚಾರಣಾ ವರದಿ ಸಲ್ಲಿಸಿದ ಕಾರಣ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ ೩ ಸೇಇವಿ ೯೬, ದಿನಾಂಕ:೨೪-೪-೧೯೯೮ ರನ್ವಯ ರೂ.೫,೦೦೦/- (ಐದು ಸಾವಿರ ರೂಪಾಯಿಗಳು ಮಾತ್ರ) ಗೌರವಧನವನ್ನು ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ ೪೫ ಸೇಇವಿ ೨೦೦೧, ದಿನಾಂಕ:೪-೩-೨೦೦೨ ರನ್ವಯ ರೂ.೧,೦೦೦/- (ಒಂದು ಸಾವಿರ ರೂಪಾಯಿಗಳು ಮಾತ್ರ) ವಾಹನ ಭತ್ಯೆಯನ್ನು ಇವರಿಗೆ ಪಾವತಿ ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ಬಗೆಗಿನ ವೆಚ್ಚವನ್ನು ಆಯವ್ಯಯದ ಲೆಕ್ಕ ಶೀರ್ಷಿಕೆ "೨೦೫೨ ಸಚಿವಾಲಯ ಸಾಮಾನ್ಯ ಸೇವೆಗಳು-೦೯೦-ಸಚಿವಾಲಯ-೦೧, ಕರ್ನಾಟಕ ಸರ್ಕಾರದ ಸಚಿವಾಲಯ-೦೫೧ ಸಾಮಾನ್ಯ ವೆಚ್ಚಗಳು" ರಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಘುರಾಮ್ ಭಂಡಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3).

ಪಿ.ಆರ್. 1424

**ವಿಷಯ:** ಶ್ರೀ ಬಿ.ಹೆಚ್.ಪೂಜಾರ್, ನಿವೃತ್ತ ಕೆಎಎಸ್ ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ- ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1) ನೋಟೀಸ್ ಸಂಖ್ಯೆ:ಸಿಆಸುಇ 148 ಎಸ್‌ಇಎನ್ 04 ದಿನಾಂಕ:12.06.06.
2) ಶ್ರೀ ಬಿ.ಹೆಚ್.ಪೂಜಾರ್, ನಿವೃತ್ತ ಕೆಎಎಸ್ ಅಧಿಕಾರಿ ಅವರ ದಿನಾಂಕ:14.06.06ರ ಉತ್ತರ.

**ಪ್ರಸ್ತಾವನೆ:-**

ಶ್ರೀ ಬಿ.ಹೆಚ್.ಪೂಜಾರ್, ನಿವೃತ್ತ ಕೆಎಎಸ್ ಅಧಿಕಾರಿ ಅವರು ಹಾವೇರಿ ಉಪ ವಿಭಾಗಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಬ್ಯಾಡಗಿ ತಾಲ್ಲೂಕು ಶಿಡೆನೂರು ಗ್ರಾಮದ ರಿ.ಸ.ನಂ.408/1+2ಬಿ ರಲ್ಲಿನ ಜಮೀನೊಂದರಲ್ಲಿನ ಕೊಳವೆ ಬಾವಿಗೆ ಸರ್ಕಾರದ ಸೂಚನೆಗಳನ್ನು ಉಲ್ಲಂಘಿಸಿ ವಿದ್ಯುತ್ ಸಂಪರ್ಕ ಪರವಾನಗಿ ನೀಡಿರುವುದು ಹಾಗೂ ಹಾವೇರಿ ಪುರ ಸಭೆಯ ವ್ಯಾಪ್ತಿಯ ಶಾಲೆಗಳ ಸ್ಕೂಲ್ ಬ್ಯಾಗ್ ಖರೀದಿಯಲ್ಲಿ ನಡೆದ ಅವ್ಯವಹಾರದ ಸಂಬಂಧ ಸ್ಥಳ ತನಿಖೆ ಮಾಡದೇ ಮೇಲಾಧಿಕಾರಿಗಳ ಸೂಚನೆಗಳನ್ನು ಉಲ್ಲಂಘಿಸಿ ಸುಳ್ಳು ವರದಿ ನೀಡುವುದರ ಮೂಲಕ ತೀವ್ರ ಸ್ವರೂಪದ ದುರ್ನಡತೆಯನ್ನು ಎಸಗಿರುವ ಆರೋಪಗಳಿಗಾಗಿ ಮೇಲೆ(1)ರಲ್ಲಿ ಓದಲಾದ ದಿನಾಂಕ:12.06.06ರ ನೋಟೀಸನ್ನು ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ ಮೇಲ್ಕಂಡ ಅಧಿಕಾರಿಯವರು ಮೇಲೆ(2)ರಲ್ಲಿ ಓದಲಾದ ದಿ:14.06.06ರ ಉತ್ತರ ಸಲ್ಲಿಸಿ ತಮ್ಮ ಮೇಲೆ ಮಾಡಲಾದ ಆರೋಪಗಳನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಅವರ ಮೇಲೆ ಮಾಡಲಾದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 148 ಎಸ್‌ಇಎನ್ 04 ಬೆಂಗಳೂರು ದಿನಾಂಕ:27ನೇ ಸೆಪ್ಟೆಂಬರ್ 2006.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ ೨೧೪ರೊಡನೆ ಓದಿಕೊಂಡಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ೧೯೫೭ರ ನಿಯಮ ೧೧(೨)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಬಿ.ಹೆಚ್.ಪೂಜಾರ್, ನಿವೃತ್ತ ಕೆಎಎಸ್ ಅಧಿಕಾರಿ ಅವರ ವಿರುದ್ಧ ಮಾಡಲಾದ ಆರೋಪಗಳ ಕುರಿತು ವಿಚಾರಣೆ ಮಾಡಲು ಶ್ರೀ ಎಂ.ಎಸ್.ಗದಗ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಧಾರವಾಡ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ ೧೬ ಸೇಇವಿ ೦೫ ದಿನಾಂಕ:೨೩.೦೮.೨೦೦೫ ರನ್ವಯ ರೂ.೬,೦೦೦/- ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ ೪೫ ಸೇಇವಿ ೨೦೦೧ ದಿನಾಂಕ:೪.೩.೨೦೦೨ ರಂತೆ ರೂ.೧೦೦೦/- ವಾಹನ ಭತ್ಯೆಯನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ೧೯೫೭ರ ನಿಯಮ ೧೧(೫)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಾಯಕರು, ಹಾವೇರಿ ಜಿಲ್ಲೆ, ಹಾವೇರಿ ಇವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ, ಲೇಖನ ಸಾಮಗ್ರಿ ಇತ್ಯಾದಿಗಳನ್ನು ಒದಗಿಸಲು ಧಾರವಾಡ ಜಿಲ್ಲಾಧಿಕಾರಿಯವರು ಕ್ರಮ ಕೈಗೊಳ್ಳುತ್ತಾರೆ. ವಿಚಾರಣೆಯನ್ನು ೩ ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಘುರಾಮ್ ಭಂಡಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3).

ಪಿ.ಆರ್. 1447

**ವಿಷಯ:** ಶ್ರೀ ಬಿ.ಸಿ.ಮುಧೋಳ್, ನಿವೃತ್ತ ಮುಖ್ಯ ಇಂಜಿನಿಯರ್ ಅವರ ವಿರುದ್ಧ ಇಲಾಖಾ ವಿಚಾರಣೆ - ವಿಚಾರಣಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ ೫೧ ಎಸ್‌ಇಎನ್ ೦೫ ದಿನಾಂಕ:೧೮.೦೨.೦೬.

2) ಶ್ರೀ ಪಿ.ಗೋಪಾಲಕೃಷ್ಣ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು ರವರ ದಿ:೨೧.೦೮.೦೬ರ ಪತ್ರ.

**ಪ್ರಸ್ತಾವನೆ:-**

ಶ್ರೀ ಬಿ.ಸಿ.ಮುಧೋಳ್, ಮುಖ್ಯ ಇಂಜಿನಿಯರ್ ರವರು ಬಾಗಲಕೋಟೆ ನಗರ ಅಭಿವೃದ್ಧಿ ಪ್ರಾಧಿಕಾರದಲ್ಲಿ ದಿ:೧೧.೦೩.೦೩ ರಿಂದ ೨೨.೧೦.೦೩ರವರೆಗೆ ಮುಖ್ಯ ಇಂಜಿನಿಯರ್ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಪ್ರಾಧಿಕಾರದ ವ್ಯಾಪ್ತಿಯಲ್ಲಿ ೩೦೦ ಕಾಮಗಾರಿಗಳನ್ನು ಅವುಗಳ ಅಂದಾಜು ಪಟ್ಟಿಯನ್ನು ಸಿದ್ಧಪಡಿಸದೆ ತಮಗೆ ಬೇಕಾದ ಕಂಟ್ರಾಕ್ಟರುಗಳಿಗೆ ನೀಡಿ ಅವುಗಳು ಪೂರ್ಣಗೊಳ್ಳದೆ ಅರ್ಧಕ್ಕೆ ನಿಂತಿದ್ದರೂ ಸಹ ಅವುಗಳ ಗುಣಮಟ್ಟ ಅಳೆಯದೇ ಪೂರ್ಣ ಹಣ ಪಾವತಿ ಮಾಡಿದ್ದು, ಆಲಮ್ ಕ್ಲೋರಿನ್ ಮತ್ತು ಪ್ರಾಧಿಕಾರಕ್ಕೆ ಅವಶ್ಯಕತೆಗಿಂತ ಹೆಚ್ಚಾಗಿ ವಾಟರ್ ಮೀಟರ್ ಖರೀದಿಯಲ್ಲಿ ಅವ್ಯವಹಾರ ಎಸಗಿ ಕರ್ನಾಟಕ ಪಾರದರ್ಶಕ ನಿಯಮಗಳನ್ನು ಪಾಲಿಸದೆ ಸರ್ಕಾರದ ಹಣವನ್ನು ದುರುಪಯೋಗಪಡಿಸಿರುವ ಆರೋಪಗಳಿಗಾಗಿ ಶ್ರೀ ಬಿ.ಸಿ.ಮುಧೋಳ್ ಅವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ೧೯೫೭ರ ನಿಯಮ ೧೧, ೧೧-ಎ ರನ್ವಯ ಇಲಾಖಾ ವಿಚಾರಣೆ ಜರುಗಿಸಲು ಮೇಲೆ(೧) ರಲ್ಲಿ ಓದಲಾದ ದಿನಾಂಕ:೧೮.೦೨.೦೬ರ ಸರ್ಕಾರಿ ಆದೇಶದಲ್ಲಿ ಶ್ರೀ ಪಿ.ಗೋಪಾಲಕೃಷ್ಣ, ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳಾಗಿಯೂ ಶ್ರೀಮತಿ ಹೇಮಲತ, ಜನರಲ್ ಮ್ಯಾನೇಜರ್, ಆರ್ ಅಂಡ್ ಆರ್ ಅಪ್ಪರ್ ಕೃಷ್ಣ ಪ್ರಾಜೆಕ್ಟ್, ಬಾಗಲಕೋಟೆ ರವರನ್ನು ಮಂಡನಾಧಿಕಾರಿಯಾಗಿಯೂ ನೇಮಿಸಲಾಗಿತ್ತು. ಆದರೆ, ಶ್ರೀ ಪಿ.ಗೋಪಾಲಕೃಷ್ಣ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ತಮ್ಮ ಅನಾರೋಗ್ಯದ ನಿಮಿತ್ತ ವಿಚಾರಣೆ ಮುಂದುವರಿಸಲು ಸಾಧ್ಯವಿಲ್ಲವೆಂದು ಮೇಲೆ(೨)ರ ಪತ್ರದಲ್ಲಿ ತಿಳಿಸಿರುತ್ತಾರೆ. ಈ ಬಗ್ಗೆ ಪರಿಶೀಲಿಸಿದ ಸರ್ಕಾರವು ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಗಳನ್ನು ಬದಲಾವಣೆ ಮಾಡಲು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 51 ಎಸ್‌ಇಎನ್ 05 ಬೆಂಗಳೂರು ದಿನಾಂಕ:30ನೇ ಸೆಪ್ಟೆಂಬರ್ 2006.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ೧೯೫೭ರ ನಿಯಮ ೧೧(೨)ರಲ್ಲಿ ಹಾಗೂ ಕೆ.ಸಿ.ಎಸ್.ಆರ್. ೨೧೪ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಆದೇಶ ದಿನಾಂಕ ೧೮.೦೨.೦೬ರಲ್ಲಿ ಶ್ರೀ ಪಿ.ಗೋಪಾಲಕೃಷ್ಣ, ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದ ಆದೇಶವನ್ನು ಈ ಮೂಲಕ ರದ್ದುಗೊಳಿಸುತ್ತಾ, ಅವರ ಬದಲಿಗೆ ಶ್ರೀ ಟಿ.ಸಂತಾನಂ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯಾಗಿ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ ೧೬ ಸೇಇವಿ ೦೫ ದಿನಾಂಕ:೨೩.೦೮.೦೫ರಂತೆ ರೂ.೬೦೦೦/- (ಆರು ಸಾವಿರ ರೂಪಾಯಿಗಳು ಮಾತ್ರ)ಗಳ ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ ४೫ ಸೇಇವಿ ೨೦೦೧ ದಿನಾಂಕ:೪.೩.೨೦೦೨ ರಂತೆ ರೂ.೧೦೦೦/- (ಒಂದು ಸಾವಿರ ರೂಪಾಯಿಗಳು ಮಾತ್ರ)ಗಳ ವಾಹನ ಭತ್ಯೆಯನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಸರ್ಕಾರವು ಶ್ರೀಮತಿ ಹೇಮಲತ, ಜನರಲ್ ಮ್ಯಾನೇಜರ್, ಆರ್ ಅಂಡ್ ಆರ್, ಅಪ್ಪರ್ ಕೃಷ್ಣ ಪ್ರಾಜೆಕ್ಟ್, ಬಾಗಲಕೋಟೆ ಇವರನ್ನೇ ಮಂಡನಾಧಿಕಾರಿಯನ್ನಾಗಿ ಮುಂದುವರಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು

ಒದಗಿಸಲು ಸರ್ಕಾರದ ಉಪ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸ್ವಾಧೀನ ಮತ್ತು ಪುನರ್‌ವಸತಿ), ಬೆಂಗಳೂರು ಇವರು ಕ್ರಮ ಕೈಗೊಳ್ಳುತ್ತಾರೆ. ವಿಚಾರಣೆಯನ್ನು ೩ ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಘುರಾಮ್ ಭಂಡಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3).

ಪಿ.ಆರ್. 1484

**PERSONNEL & ADMINISTRATIVE REFORMS SECRETARIAT**

**Sub :** Enquiry under Karnataka State Servants (Determination of Age) Act 1974 - Appointment of Enquiry officer and Presenting officer - reg.

**Read :**
1) Applications dated 31-7-2001 of Sri G.B.Chebbi, IPS addressed to Secretary to Govt. of India, Ministry of Home Affairs, New Delhi - through proper channel.
2) Order dated 30-8-2005 of High Court of Karnataka in W.P.No.18863/05 filed by Sri G.B.Chebbi.
3) State Govt.'s letter of even number dt. 22-4-2006 addresed to Secretary to Govt. of India, MHA, New Delhi.
4) Letter No.F.I-45013/1/2005-IPS-I, dt. 18-5-06 of Under Secretary to Govt. of India, MHA, New Delhi.

**Preamble :**

Sri. G.B. Chebbi was initialy appointed to the Karnataka State Government Service as Police Sub-Inspector from 01-08-1972 by Direct Recruitment . On his appointment to said post his date of birth was entered and accepted as 01-06-1947 in the Service Book & records based on the entries made in the School records. While working as PSI he submitted application to the Karnataka Public Service Commission through proper channel(i.e. through his department) for the post of Deputy Superintendent of Police. The selection to the said post was by Direct Recruitment. He was selected by the KPSC for appointment as Deputy Superintendent of Police, by Direct Recruitment in the year – 1982. While working as Deputy Superintendent of Police, Jamakandi Sub-division(Bijapur District) he is stated to have submitted an application dated: 15-05-1984 to the S.P. Bijapur District for change of his date of birth from 01-06-1947 to 16-10-1950. In the said application, it is stated that during the training period as Deputy Superintendent of Police, he came to know that his date of birth was shown earlier to that of his elder brother and on enquiring with his parents about this discrepency he was told that his date of birth was entered by them in the school records on approximate basis. Thereafter he obtained the date of birth certificate from the Tahasildar concerned. In the certificate dated:05-04-1984 issued by the Tahasildar of Kundhagol Taluk (Dharwad District) the date of birth is shown as 16-10-1950. Sri. Chebbi did not receive any endorsement from the S.P. concerned or from the DG&IGP/Government in Home Department, in response to his representation dated: 15-05-84 for change of date of birth. After verification of the matter, the State Home Department has informed that the application dated:15-05-1984 reportedly submitted by Sri. G.B. Chebbi, the then Deputy Superintendent of Police, Jamakhandi has not been received in the office of DG & IGP, Bangalore through office of S.P. Bijapur or DIGP, Belgaum (concerned range office).

Sri. G.B. Chebbi was appointed to IPS w.e.f. 02-03-1998 under the IPS (Appointment by Promotion) Regulations vide Government of India Notification dated:02-03-98. He submitted another representation dated: July 2001 addressed to Secretary to Government of India, Ministry of Home Affairs, New Delhi through proper channel i.e., to the Chief Secretary to the Government requesting to alter his date of birth as already requested in earlier representation dated:15-05-1984. This application was referred to the Director General of Police for comments. For want of reply from the DG & IGP regarding action taken on the previous application dated:15-05-1984, the second application dated: July 2001 also remained unattended. As Sri. G.B. Chebbi did not receive any reply from Government in response to his 2 applications, he filed O.A. No. 389/2002 in the CAT, Bangalore. The Tribunal in its order dated:18-04-2002 held that the O.A. is barred by limitation under Section 21 of the Administrative Tribunal Act and hence dismissed the O.A. The officer filed W.P. No. 2911/2004 in the High Court of Karnataka, against the Tribunal's order. The High Court in its order dated:04-08-2004 set aside the order dated:18-04-2002 of the Tribunal and remanded the O.A. to the Tribunal with a direction to dispose of the same on merit. The High Court held that the representation/application made by the petitioner for alteration of date of birth after he joined the service as Deputy Superintendent of Police by way of direct recruitment cannot be regarded as the one hit by limitation prescribed under sub - Section 2 of Section 5

of the Karnataka State Servants(Determination of Age) Act, 1974. The Tribunal in its order dated:07-07-2005 again dismissed the O.A. The Tribunal held that the applicant had not established any justification for change of his date of birth as required under Law. Aggrieved by the order of the Tribunal, the officer filed W.P. No. 18863/2005 in the High Court of the Karnataka. The High Court of Karnataka in its order dated:30-08-2005 allowed the W.P., set aside the order dated:07-07-2005 of the Tribunal and directed the Respondent No. 2 namely viz., State of Karnataka (represented by Chief Secretary) to consider and dispose of the applications dated:15-05-84 & July 2001 of the petitioner on merits and in accordance with law, within a period of 3 months. The High Court held that when the State Government has not yet taken any decision on the representation of the petitioner, even disciplining the process of decision making would not arise and therefore the Tribunal, ought to have directed the State Government to consider and dispose of the representation of petitioner. The High Court has directed the Respondent No. 2 to decide the applications of the Petitioner on merit taking into account the evidence produced by him. The Court has directed that the observations/findings of the Tribunal in its order dated:07-07-2005 shall be eschewed in the decision making.

The State Government Advocate and the Legal Cell of the State Government have opined that it is not a fit case for filing an appeal against the order of the High Court.

In view of the directions of the High Court in its order dated: 30-08-2005 to consider and dispose of both the representations, it becomes necessary for the Government to consider and dispose of the representations on merits and in accordance with law, so as to comply with the order of the High Court.

As per Section 5(1) of the Determination of Age Act, the State Government may at any time, after an enquiry alter the age & date of birth of a State Servant as recorded in his service register, subject to sub-Section 2 which stipulates time limitation for submission of representation. Further as per Section 5(3) the State Government may by notification in official gazette appoint such officer as it deems fit for the purpose of making an enquiry under the said Section.

Sri. G.B. Chebbi has reportedly submitted his first representation dated:15-05-84 while working as State Police Service Officer. Hence the representation dated:15-05-84 requires to be examined as per State Rules/Act. If his selection and appointment as Dy. S.P. from 24-03-82 by direct recruitment is held as a fresh recruitment as contended by the High Court in para 6 of its order dated:30-08-2005, then it has to be construed that submission of representation by him on 15-05-84 for change of his date of birth is well within the time limit of 3 years under Section 5(2) of Karnataka Government Servents (Determination of Age) Act, 1974. If on consideration of the application in accordance with Law, the State Govt., comes to the conclusion that there need be an alteration in the date of birth that has to be first effected in the State Service records, then the Central Government may have to take action as per rule 16A(3) of All India Services (DCRB) Rules to carryout the consequential corrections in their records.

The Government of India, Ministry of Home Affairs, in their letter dated 18-5-2006 read at Sl.No.4 above, have informed the Government of Karnataka to dispose of the representations dated 15-5-84 and 31-7-2001 of Sri G.B.Chebbi, keeping in view the comments/views furnished in their said letter dated 18-5-2006.

Accordingly, it has been decided to hold an enquiry u/s 5(3) of the Karnataka State Servants (Determination of Age) Act 1974 so as to enable the State Government to dispose of the representation dated 15-5-84 & 31-7-2001 of Sri G.B.Chebbi as directed by the High Court of Karnataka, so that the Government of India can take final decision in the matter under relevant provisions of rule 16.A of All India Services (DCRB) Rules 1958.

**GOVERNMENT ORDER No. DPAR 139 SPS 2005, BANGALORE, DATED 5th OCTOBER, 2006.**

Having regard to the circumstances explained in the preamble, the Government of Karnataka hereby appoint the Solicitor and Ex-officio Deputy Secretary to Government, Department of Law, Justice & Human Rights as Enquiry Officer to hold enquiry u/s 5(3) of the Karnataka State Servants (Determination of Age) Act, 1974 regarding request of Sri G.B.Chebbi, IPS (formerly State Police Service officer) for alteration of his date of birth vide his representation dated 15-5-1984 r/w 31-7-2001.

The Government also hereby appoints the Under Secretary to Government (Litigation-2), Department of Law, Justice & Human Rights, Bangalore as the Presenting Officer to present the case on behalf of the State Government.

By Order and in the name of the Governor of Karnataka

**K. SUDHAKARA SHETTY**

Under Secretary to Government, DP&AR (Services-1)

P.R. 1462

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಕೆ.ಎಲ್.ಹನುಮಂತರಾವ್, ಹಿಂದಿನ ಮುಖ್ಯಮಂತ್ರಿಯವರ ವಿಶೇಷ ಕರ್ತವ್ಯಾಧಿಕಾರಿ ಅವರ ಗೈರು ಹಾಜರಿಯನ್ನು ^ಡೈಸ್‌ನಾನ್^ ಅವಧಿಯೆಂದು ಪರಿಗಣಿಸುವ ಕುರಿತು.

**ಓದಲಾಗಿದೆ:** ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ: ಸಿಎಂ 342 ಈಇಎನ್ 2004, ದಿನಾಂಕ: 14.7.2006.

**ಪ್ರಸ್ತಾವನೆ:**

ಶ್ರೀ ಕೆ.ಎಲ್.ಹನುಮಂತರಾವ್, ಸರ್ಕಾರದ ನಿವೃತ್ತ ಅಧಿಕಾರಿ ಅವರು ಹಿಂದಿನ ಮುಖ್ಯ ಮಂತ್ರಿಯವರ ವಿಶೇಷ ಕರ್ತವ್ಯಾಧಿಕಾರಿಯಾಗಿ ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ವೈದ್ಯಕೀಯ ಕಾರಣಗಳ ಮೇಲೆ ದಿನಾಂಕ: 9.9.2005 ರಿಂದ 1.1.2006ರವರೆಗೆ ಗೈರುಹಾಜರಾಗಿದ್ದ ಅವಧಿಗೆ ವೇತನ ರಹಿತ ರಜೆ ಮಂಜೂರು ಮಾಡಲು ಹಿಂದಿನ ಮುಖ್ಯಮಂತ್ರಿಯವರು ಶಿಫಾರಸ್ಸು ಮಾಡಿರುವುದರಿಂದ, ಸದರಿ ಅವಧಿಗೆ ವೇತನ ರಹಿತ ರಜೆ ಮಂಜೂರು ಮಾಡುವಂತೆ ಹಾಗೂ ತದನಂತರ ಕರ್ತವ್ಯ ನಿರ್ವಹಿಸಿದ ಅವಧಿಯಾದ ದಿನಾಂಕ: 2.1.2006ರಿಂದ 3.2.2006ರವರೆಗೆ ಅವರಿಗೆ ಅರ್ಹವಿರುವ ವೇತನವನ್ನು ಮಂಜೂರು ಮಾಡಿ ಅವರಿಂದ ಸರ್ಕಾರಕ್ಕೆ ಬರಬೇಕಾದ ರೂ. 15,973.00 ಗಳನ್ನು ಕಟಾಯಿಸಿ ಬಾಕಿ ಹಣವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 45 ಸಅಸೇ 2006, ಬೆಂಗಳೂರು, ದಿನಾಂಕ: 7ನೇ ಅಕ್ಟೋಬರ್ 2006.**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಕೆ.ಎಲ್.ಹನುಮಂತರಾವ್, ಸರ್ಕಾರದ ನಿವೃತ್ತ ಅಧಿಕಾರಿ ಅವರು ಹಿಂದಿನ ಮುಖ್ಯಮಂತ್ರಿಯವರ ವಿಶೇಷ ಕರ್ತವ್ಯಾಧಿಕಾರಿಯಾಗಿ ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ದಿನಾಂಕ: 9.9.2005 ರಿಂದ 1.1.2006ರವರೆಗೆ ವೈದ್ಯಕೀಯ ಕಾರಣದ ಮೇಲೆ ಗೈರು ಹಾಜರಿಯಾದ ಅವಧಿಯನ್ನು ^ಡೈಸ್‌ನಾನ್^ ಎಂದು ಪರಿಗಣಿಸಲಾಗಿದೆ. ಹಾಗೂ ದಿನಾಂಕ: 2.1.2006ರಿಂದ 3.2.2006ರವರೆಗೆ ಕರ್ತವ್ಯ ನಿರ್ವಹಿಸಿದ ಅವಧಿಗೆ ಅರ್ಹವಿರುವ ವೇತನವನ್ನು ಮಂಜೂರು ಮಾಡಿ, ಸದರಿಯವರಿಂದ ಸರ್ಕಾರಕ್ಕೆ ಬರಬೇಕಾದ ರೂ. 15,973.00 (ರೂ. ಹದಿನೈದು ಸಾವಿರದ ಒಂಭೈನೂರಾ ಎಪ್ಪತ್ತಮೂರು ಮಾತ್ರ) ಬಾಕಿ ಹಣವನ್ನು ಕಟಾಯಿಸಿ ಉಳಿದ ಮೊತ್ತವನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1554 ವೆಚ್ಚ–5/2006, ದಿನಾಂಕ: 11.9.2006 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ), ಸಿಆಸುಇ (ಸೇವೆಗಳು–2).

ಪಿ.ಆರ್. 1463

## ಶಿಕ್ಷಣ ಸಚಿವಾಲಯ

ಸುತ್ತೋಲೆ

**ಸಂಖ್ಯೆ:ಇಡಿ:204:ಯೋಯೋಕ 2006, ಬೆಂಗಳೂರು, ದಿನಾಂಕ:25ನೇ ಸೆಪ್ಟೆಂಬರ್ 2006**

**ವಿಷಯ:**- ಸರ್ಕಾರಿ ಕಿರಿಯ ಮತ್ತು ಹಿರಿಯ ಪ್ರಾಥಮಿಕ ಶಾಲೆಗಳಿಗೆ ಶಾಲಾ ಅನುದಾನ ಬಿಡುಗಡೆ ಮತ್ತು ಬಳಕೆ ಬಗ್ಗೆ ಮಾರ್ಗಸೂಚಿ

ರಾಜ್ಯದ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಉತ್ತಮ ಶೈಕ್ಷಣಿಕ ವಾತಾವರಣವನ್ನು ಮೂಡಿಸುವ ಮತ್ತು ಮಕ್ಕಳ ಕಲಿಕಾ ವಾತಾವರಣದೊಂದಿಗೆ ಸೌಲಭ್ಯಗಳನ್ನು ಉತ್ತಮ ಪಡಿಸಲು ಪ್ರತಿ ಶಾಲೆಯ ಸ್ಥಳೀಯ ಅವಶ್ಯಕತೆಗಳನ್ನು ಗಮನದಲ್ಲಿಟ್ಟುಕೊಂಡು ಶಾಲಾ ಮಟ್ಟದಲ್ಲೇ ನಿರ್ಧಾರಗಳನ್ನು ತೆಗೆದುಕೊಂಡು, ಶಾಲಾ ಅನುದಾನವನ್ನು ಆಯಾ ಶಾಲೆಯ ಶಾಲಾಭಿವೃದ್ಧಿ ಮತ್ತು ಉಸ್ತುವಾರಿ ಸಮಿತಿಗಳಿಗೆ ನೀಡುವ ಅವಶ್ಯಕತೆಯನ್ನು ಗುರ್ತಿಸಲಾಗಿದೆ. ಈ ಅಂಶದ ಹಿನ್ನಲೆಯಲ್ಲಿ 2006–07ನೇ ಸಾಲಿಗೆ ಜಿಲ್ಲಾ ವಲಯದಡಿ ಲೆಕ್ಕಶೀರ್ಷಿಕೆ 2202–01–101–0–71–ಸರ್ಕಾರಿ ಪ್ರಾಥಮಿಕ ಶಾಲೆಗಳು[ಯೋಜನೇತರ]ಅಡಿ ವೇತನ ಮತ್ತು ವೇತನೇತರ ವೆಚ್ಚಗಳಿಗಾಗಿ ಕ್ರಮವಾಗಿ ರೂ.179978.45ಲಕ್ಷ ಮತ್ತು 1102.80ಲಕ್ಷಗಳನ್ನು ಒದಗಿಸಲಾಗಿದೆ. ಸದರಿ ವೇತನೇತರ ಮೊತ್ತವನ್ನು ಅನುಬಂಧದಲ್ಲಿ ತೋರಿಸಿರುವಂತೆ ಜಿಲ್ಲಾವಾರು ಹಂಚಿಕೆಯನ್ನು ಆಯವ್ಯಯದಲ್ಲಿಯೇ ಮಾಡಲಾಗಿದೆ. ಈ ಮೊತ್ತವನ್ನು ಸರ್ಕಾರಿ ಪ್ರಾಥಮಿಕ ಶಾಲೆಗಳಿಗೆ ಸಾದಿಲ್ವಾರು ಖರ್ಚಿಗಾಗಿ ಕೆಳಗಿನ ಕಾರ್ಯಕ್ರಮಗಳಿಗೆ ಬಳಸಲು ಅನುಮತಿಸಿದೆ. ಈ ಮೊತ್ತವನ್ನು ಸರ್ಕಾರಿ ಶಾಲೆಗಳಿಗೆ ಶಿಕ್ಷಕರ ಸಂಖ್ಯೆಗೆ ಅನುಗುಣವಾಗಿ ಹಂಚಲು ಆದೇಶಿಸಿದೆ. ಅಂದರೆ ಇಬ್ಬರು ಶಿಕ್ಷಕರಿರುವ ಶಾಲೆಗೆ ಒಬ್ಬರು ಶಿಕ್ಷಕರಿರುವ ಶಾಲೆಯ ಹಂಚಿಕೆಯ ಎರಡು ಪಟ್ಟು ಹಂಚುವುದು. ಮೂರು ಶಿಕ್ಷಕರಿರುವ ಶಾಲೆಗೆ ಮೂರು ಪಟ್ಟು ಮುಂತಾದ ರೀತಿಯಲ್ಲಿ ಹಂಚುವುದು. ಈ ಮೊತ್ತವನ್ನು ಸಂಬಂಧಿಸಿದ **ಶಾಲಾ ಅಭಿವೃದ್ಧಿ ಮತ್ತು ಉಸ್ತುವಾರಿ ಸಮಿತಿಗಳ** ಮೂಲಕ ಶಾಲೆಗಳ ತುರ್ತು ಅವಶ್ಯಕತೆಗಳಿಗನುಗುಣವಾಗಿ ಈ ಕೆಳಕಂಡ ಕಾರ್ಯಕ್ರಮಗಳಿಗೆ ಮಾತ್ರ ವೆಚ್ಚ ಮಾಡಲು ಬಿಡುಗಡೆ ಮಾಡುವಂತೆ ಸೂಚಿಸಲಾಗಿದೆ.

**ಕಾರ್ಯಕ್ರಮ ಮಾರ್ಗಸೂಚಿ:–**

1. ಕಛೇರಿಯಲ್ಲಿ ಬಳಸುವ ಸಾಧನ ಸಲಕರಣೆಗಳು ಹಾಗೂ ಕಡತಗಳ ಖರೀದಿಗಾಗಿ
2. ನೀರು, ವಿದ್ಯುತ್ ವೆಚ್ಚಗಳ ಪಾವತಿಗಾಗಿ ಹಾಗೂ ಶಾಲಾ ಮಕ್ಕಳಿಗೆ ಉಪಯುಕ್ತವೆನಿಸುವ ಸರಳ ಭಾಷೆ ಯಲ್ಲಿರುವ ಪುಸ್ತಕ / ಪತ್ರಿಕೆಗಳ ಖರೀದಿ.
3. ಶಾಲೆಗೆ ತುರ್ತು ದುರಸ್ತಿ, ಕಿಟಕಿ, ಬಾಗಿಲು ದುರಸ್ತಿ, ವಿದ್ಯುತ್ ಸಂಪರ್ಕ, ಸುಣ್ಣ, ಬಣ್ಣ ಬಳಿಯುವುದು, ಪೀಠೋಪಕರಣ ದುರಸ್ತಿ, ಬ್ಲಾಕ್ ಬೋರ್ಡ್ ಪೈಯಿಟಿಂಗ್
4. ತೀವ್ರ ಅವಶ್ಯಕತೆ ಇರುವ ಪೀಠೋಪಕರಣ ಖರೀದಿ ಇತ್ಯಾದಿ
5. ಶಾಲೆಯ ಪರಿಸರದಲ್ಲಿ ಮರ / ಗಿಡ ಬೆಳೆಸುವುದು

6. ನೀರಿನ ಡ್ರಂ/ ಮಟರ್ ಫಿಲ್ಟರ್ ನೀರಿನ ಗ್ಲಾಸ್‌ಗಳ ಖರೀದಿ.
7. ಟಿ.ವಿ/ವಿಸಿಡಿ/ಟೇಪ್ ರೇಕಾರ್ಡ್‌ರ್ ಇದ್ದಲ್ಲಿ, ಶಾಲಾ ಮಕ್ಕಳಿಗೆ ಅನುಕೂಲವಾಗುವ ಶೈಕ್ಷಣಿಕ ವಿಚಾರಗಳ ವಿಡಿಯೋ ಕ್ಯಾಸೆಟ್ ಮತ್ತು ಅಡಿಯೋ ಕ್ಯಾಸೆಟ್ ಖರೀದಿ
8. ಶಾಲೆಗಳ ನಾಮಫಲಕ ಬರೆಸುವುದು
9. ಶಾಲಾ ಮಾಹಿತಿ ವಿವರ ನೀಡುವ ಶಾಲಾ ಡಿಸ್‌ಪ್ಲೇ ಬೋರ್ಡ್ ಬರೆಯುವುದು
10. ಮಕ್ಕಳಿಗೆ ಕೊರಲು ಮರದ ಮಣೆ, ಜಮಖಾನ ಖರೀದಿಸುವುದು
11. ಕಲಿಕಾ – ಬೋಧನೆಗೆ ಅತಿ ಅಗತ್ಯವಿದ್ದ ಶಾಲೆಯಲ್ಲಿ ಪ್ರಸ್ತುತ ಲಭ್ಯವಿಲ್ಲದ ಸಾಮಗ್ರಿಗಳ ಖರೀದಿ
12. ವಿಜ್ಞಾನ ಬೋಧನೆಗೆ ಪ್ರಯೋಗಾಲಯಕ್ಕೆ ಅಗತ್ಯವಾದ ಸಾಮಗ್ರಿಗಳ ಖರೀದಿ.
13. ನಾಡಹಬ್ಬ ಹಾಗೂ ರಾಷ್ಟ್ರೀಯ ಹಬ್ಬಗಳ ಆಚರಣೆಗಾಗಿ
14. ಶಾಲೆಯ ವಾರ್ಷಿಕ ಪತ್ರಿಕೆಯನ್ನು ಪ್ರಕಟಿಸಲು
15. ಬಿ.ಇ.ಓ ಹಾಗೂ ಡಿ.ಡಿ.ಪಿ.ಐ ಕಛೇರಿಗಳಿಂದ ವಿತರಿಸುವ ಸಮವಸ್ತ್ರ, ಪಠ್ಯಪುಸ್ತಕ ಮುಂತಾದವುಗಳನ್ನು ಶಾಲೆಗೆ ತೆಗೆದುಕೊಂಡು ಬರಲು
16. 'ಪ್ರತಿಭಾ ಕಾರಂಜಿ' ಕಾರ್ಯಕ್ರಮದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಲು
17. 'ಶಾಲಾವನ' ರೂಪಿಸಲು ಅಗತ್ಯ ಸಲಕರಣೆಗಳ ಸಂಗ್ರಹಕ್ಕಾಗಿ
18. ಶಾಲಾ ಫಲಕ ಹಾಗೂ ಬ್ಯಾನರ್‌ಗಳ ತಯಾರಿಕೆಗಾಗಿ
19. ಕ್ರೀಡೆ, ಚರ್ಚಾಸ್ಪರ್ಧೆ, ವೈಜ್ಞಾನಿಕ, ತಾಂತ್ರಿಕ ವಿಷಯಗಳ ಬಗ್ಗೆ ರಚನಾತ್ಮಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು
20. ಆರೋಗ್ಯ, ಮೌಲ್ಯಗಳು, ತಂತ್ರಜ್ಞಾನದ ಮೂಲಕ ಶಿಕ್ಷಣ, ಮುಂತಾದ ವಿಷಯಗಳ ಬಗ್ಗೆ ಉಪನ್ಯಾಸಗಳನ್ನು ಏರ್ಪಡಿಸಲು
21. ಶಾಲೆಯ ಅಭಿವೃದ್ಧಿಗಾಗಿ ಸಂಪೂರ್ಣವಾಗಿ ತೊಡಗಿಸಿಕೊಂಡ ಬೋಧಕರನ್ನು ಸನ್ಮಾನಿಸಲು.
22. ಸೃಜನಾತ್ಮಕ ಚಟುವಟಿಕೆಗಳಲ್ಲಿ ಶಿಕ್ಷಕರು ಹಾಗೂ ವಿದ್ಯಾರ್ಥಿಗಳನ್ನು ತೊಡಗಿಸಲು ಭಾಷಾ ಸಂಘ, ಸಾಂಸ್ಕೃತಿಕ ಸಂಘ ಮುಂತಾದ ಸಂಘಗಳ ನಿರ್ವಹಣೆಗಾಗಿ

ಮೇಲ್ಕಂಡ ಅಂಶಗಳನ್ನು ಅನುಷ್ಠಾನಗೊಳಿಸಲು ಕೋರಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಹಾಗೂ ಅವರ ಹೆಸರಿನಲ್ಲಿ

**ಕೆ.ಶ್ರೀಕಂಠೇಶ್ವರ**

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ

ಸರ್ಕಾರದ ಜಂಟಿಕಾರ್ಯದರ್ಶಿಗಳು, ಶಿಕ್ಷಣ ಇಲಾಖೆ(ಯೋಜನೆ)

**ಸರ್ಕಾರದ ಸುತ್ತೋಲೆ ಸಂಖ್ಯೆ: ಇಡಿ:204:ಯೋಯೋಕ 2006, ದಿನಾಂಕ:25.09.2006ಕ್ಕೆ ಅನುಬಂಧ**
**ಜಿಲ್ಲಾ ವಲಯ ಆಯವ್ಯಯ ಲೆಕ್ಕ ಶೀರ್ಷಿಕೆ 2202-01-101-0-71 (ಯೋಜನೇತರ)2006-07ಕ್ಕೆ**

| ಕ್ರ. ಸಂ. | ಜಿಲ್ಲೆಗಳ ಹೆಸರು | ವೇತನೇತರ ವೆಚ್ಚಕ್ಕೆ ನಿಗಧಿಯಾದ ಆಯವ್ಯಯ [ಲಕ್ಷರೂಗಳಲ್ಲಿ] | ಜಿಲ್ಲೆಯ ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕರ ಸಂಖ್ಯೆ | ಪ್ರತಿ ಶಾಲೆಗೆ ಪ್ರತಿ ಶಿಕ್ಷಕರ ಸಂಖ್ಯೆಗೆ ಅನುಗುಣವಾಗಿ ಹಂಚಲು ಶಿಕ್ಷಕ ವಾರು ಅನುದಾನದ ಮೊತ್ತ [ಪ್ರತಿ ಶಿಕ್ಷಕರುಗಳಿಗೆ ಹಂಚಬೇಕಾದ ಹಣ] |
|---|---|---|---|---|
| 1 | 2 | 3 | 4 | 5 |
| 1 | ಬೆಂಗಳೂರು ನಗರ | 47.24 | 6001 | 787.00 |
| 2 | ಬೆಂಗಳೂರು ಗ್ರಾಮಾಂತರ | 51.97 | 6886 | 755.00 |
| 3 | ಬಾಗಲಕೋಟೆ | 34.00 | 4842 | 702.00 |
| 4 | ಬೆಳಗಾಂ | 89.51 | 12222 | 732.00 |
| 5 | ಬಳ್ಳಾರಿ | 32.00 | 5314 | 602.00 |
| 6 | ಬೀದರ್ | 39.32 | 5439 | 723.00 |
| 7 | ಬಿಜಾಪುರ | 45.67 | 5948 | 768.00 |
| 8 | ಚಿಕ್ಕಮಗಳೂರು | 33.05 | 4761 | 694.00 |
| 9 | ಚಿತ್ರದುರ್ಗ | 32.00 | 5541 | 578.00 |
| 10 | ಚಾಮರಾಜನಗರ | 16.00 | 2718 | 589.00 |
| 11 | ದಾವಣಗೆರೆ | 32.00 | 5714 | 560.00 |
| 12 | ದಕ್ಷಿಣ ಕನ್ನಡ | 28.83 | 4125 | 699.00 |
| 13 | ಧಾರವಾಡ | 28.00 | 3892 | 719.00 |
| 14 | ಗುಲ್ಬರ್ಗ | 69.38 | 9105 | 762.00 |
| 15 | ಗದಗ | 39.10 | 3037 | 1287.00 |
| 16 | ಹಾಸನ | 50.67 | 7342 | 690.00 |
| 17 | ಹಾವೇರಿ | 30.00 | 4994 | 601.00 |
| 18 | ಕೋಲಾರ | 68.62 | 9184 | 747.00 |

| 1 | 2 | 3 | 4 | 5 |
|---|---|---|---|---|
| 19 | ಕೊಡಗು | 10.00 | 1798 | 556.00 |
| 20 | ಕೊಪ್ಪಳ | 22.00 | 3466 | 635.00 |
| 21 | ಮಂಡ್ಯ | 44.88 | 6076 | 739.00 |
| 22 | ಮೈಸೂರು | 52.64 | 7490 | 703.00 |
| 23 | ರಾಯಚೂರು | 28.32 | 3455 | 820.00 |
| 24 | ಶಿವಮೊಗ್ಗ | 39.61 | 5441 | 728.00 |
| 25 | ತುಮಕೂರು | 73.78 | 9954 | 741.00 |
| 26 | ಉಡುಪಿ | 19.85 | 2721 | 730.00 |
| 27 | ಉತ್ತರ ಕನ್ನಡ | 44.36 | 5985 | 741.00 |
| | ಒಟ್ಟು | **1102.80** | **153451** | |

ಕೆ.ಶ್ರೀಕಂಠೇಶ್ವರ

ಪಿ.ಆರ್. 1414

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ

ಸರ್ಕಾರದ ಜಂಟಿಕಾರ್ಯದರ್ಶಿಗಳು, ಶಿಕ್ಷಣ ಇಲಾಖೆ(ಯೋಜನೆ)

## AGRICULTURE AND HORTICULTURE SECRETARIAT

**Sub :** Implementation of the Coconut Development Board Projects during 2006-07.

**Read :**
1) G.O No. ಕೃತೋಇ 71 ತೋಯೋಕಾ 2006 ದಿ: 15.4.2006.
2) Letter of CDB No.F.No.223/2006-PA dated 5.5.2006.
3) Letter of Director of Horticulture No.DH/PLN/AHO5/ 15/2006-07 dated 8.6.2006.
4) G.O No.AHD 80 HPP 2006 dated.13.6.2006.
5) CDB letter No.F.No.597/2006-Dev (Kar) dated 9.8.2006
6) CDB letter No.F.No.223/2006-07 Dev dated 11.8.2006
7) Letter of Director of Horticulture No.DH/PLN/AHO5/ 15/2006-07 dated 29.8.2006.
8) Letter of Director of Horticulture No.DH/PC/AHO2/ 12/2006-07 dated 5.9.2006.
9) CDB letter No.F.No.1272(A)/2002 Dev dated 27.7.2006
10) CDB letter No.F.No.1272/2003(Kar)-BC Dev dated 27.7.2006

**PREAMBLE**:

The State Government had accorded sanction for implementation of the scheme " Integrated Farming in Coconut Holdings with Coconut Development Board Assistance "(100% CDB) under Head of account 2401-00-108-2-35 with an outlay of Rs150.00 lakh as an Ongoing scheme during the year 2006-2007 vide Government Order read at (1) above. Further, under Zilla Panchayat sector an amount of Rs.226.45 lakh has been provided for the same purpose during 2006-07. Thus, a total amount of Rs.376.45 lakh is made available for Coconut Development Board programme during 2006-07.

2. Coconut Development Board has conveyed its approval for the implementation of its project "Integrated Development of Coconut Industry in India" at a revised total cost of Rs. 259.44 lakh for the year 2006-07 vide its letter read at (2) above. Accordingly sanction had been given vide Government Order read at (4) above for implementing Coconut Development Board programmes totaling to Rs.259.44 lakhs.

3. Coconut Development Board has now enhanced the allocation for the State vide its letter read at (5) and (6) above and the total allocation has been Rs.406.315 lakhs which includes components to be implemented directly by the Coconut Development Board and components to be implemented by the Department of Horticulture, Government of Karnataka, separately.

4. The Director of Horticulture has examined the same and has requested the Government to accord administrative sanction for the implementation of the Coconut Development Board programmes with a revised allocation of Rs.412.955 lakh during 2006-07 as per his letter read at (7) and (8) above. This includes the enhanced allocation of the Coconut Development Board programmes and revalidated programmes (Rs.6.64 lakhs) under "Technology Mission on Coconut Schemes" for the year 2006-07 as per Coconut Development Board letters read at (9) and (10) above.

5.The total allocation under the scheme of “Integrated Farming in Coconut Holdings with Coconut Development Board Assistance (100% CDB)”, Head of Account 2401-00-108-2-35 during 2006-07 is Rs.376.45 lakhs. This includes components to be implemented under State Sector (Rs.150.00 lakh) and Zilla Panchayat Sector (Rs.226.45 lakh). The proposal of the Director of Horticulture has been examined and hence this order.

**GOVERNMENT ORDER NO.AHD 80 HPP 2006, BANGALORE, DATED 11th September 2006**

Government is pleased to permit the Director of Horticulture for implementing the Coconut Development Programmes for the year 2006-2007 with a revised allocation of Rs.412.955 lakh on ongoing basis during the year 2006-2007. Out of this Rs.353.765 lakh will be met under the scheme namely “ Integrated Farming in Coconut Holdings with Coconut Development Board Assistance (100% CDB) (2401-00-108-2-35). The programmes for Rs.59.19 lakh will be implemented directly by the Coconut Development Board. The revised programme details are as follows;

| Sl No. | Name of the Scheme | Physical(Ha.) | | | Financial (Rs.in lakhs) | | |
|---|---|---|---|---|---|---|---|
| | | CDB | Dept. of Hort. | Total | CDB | Dept. of Hort. | Total |
| A | **Integrated Development of Coconut industry in India** | | | | | | |
| 1) | **Production and distribution of planting materials.** | | | | | | |
| | a) Production and distribution of TxD hybrids and other related varieties.(50:50 basis) seedlings no. | - | 25000 | 25000 | 3.125 | - | 3.125 |
| | b) Aid to private nurseries and seed gardens. | | | | | | |
| | (i) Seed garden (Big unit) | 2 | - | 2 | 7.50 | - | 7.50 |
| | (ii) Nursery (Small unit) | 6 | - | 6 | 6.00 | - | 6.00 |
| 2) | Expansion of area under Coconut (hectares) | 250 | | 250 | 12.44 | | 12.44 |
| 3) | Integrated Farming in Coconut holdings for Productivity Improvement | | | | | | |
| | a) Management of disease affected Palms (Numbers) | - | 10000 | 10000 | - | 25.00 | 25.00 |
| | b) Laying out of demonstration plot | | | | | | |
| | (i) New plots (hectares) | 115 | 635 | 750 | 20.125 | 111.125 | 131.25 |
| | (ii) Old plots (hectares) | - | 1114 | 1114 | - | 195.00 | 195.00 |
| | c) Organic Manure Unit | 50 | 80 | 130 | 10.00 | 16.00 | 26.00 |
| | Total- A | | | | 59.19 | 347.125 | 406.315 |
| B | Technology Mission on Coconut | | | | | | |
| 1) | Control of mite (workshop) | - | 1 | 1 | - | 0.50 | 0.50 |
| 2) | Biological control of leaf eating caterpillar (labs) | - | 2 | 2 | - | 6.14 | 6.14 |
| | Total- B | | | | - | 6.64 | 6.64 |
| | GRAND TOTAL | | | | 59.19 | 353.765 | 412.955 |

Under component-A (1) the State share will be met out of funds earmarked under Farms and Nurseries. It will be implement in KRS Horticulture Farm, Mandya district.

The district-wise physical targets under Area Expansion Programme and Aid to private nurseries during 2006-07will be as follows;

| Sl. No | District | Phy. (Ha) | Sl. No | District | Phy. (Ha) |
|---|---|---|---|---|---|
| 1. | Bangalore (Urban) | 4 | 15. | Kodagu | 5 |
| 2. | Bangalore (Rural) | 10 | 16. | Belgaum | 5 |
| 3. | Chitradurga | 17 & 3 small unit under Aid to private nurseries | 17. | Bagalkot | 5 |
| 4. | Davanagere | 11 | 18. | Bijapur | 5 |
| 5. | Kolar | 12 | 19. | Dharwad | 5 |
| 6. | Shimoga | 10 | 20. | Gadag | 5 |
| 7. | Tumkur | 22 & 1 big unit under Aid to private nurseries | 21. | Haveri | 7 |
| 8. | Mysore | 14 | 22. | Uttara Kannada | 12 |
| 9. | Mandya | 17 | 23. | Bellary | 6 |
| 10. | Chamarajanagar | 17 | 24. | Gulbarga | 4 |
| 11. | Chickmagalur | 12 | 25. | Koppal | 4 |
| 12. | Dakshina Kannada | 12 & 3 small unit under Aid to private nurseries | 26. | Raichur | 4 |
| 13. | Udupi | 10 | 27. | Bidar | 3 |
| 14. | Hassan | 12 & 1 big unit under Aid to private nurseries | | | |
| | | TOTAL | 250 ha. and 2 big and 6 small nurseries | | |

The Scheme will be implemented as per the following;

1. The Director of Horticulture shall implement the scheme strictly in accordance with the guidelines of Coconut Development Board. He shall also get the releases made from Coconut Development Board
2. Submit the Utilization Certificate to Coconut Development Board under intimation to the Government.
3. 30%, 16% and 8% of allocation under demonstration plot, organic manure unit, area expansion programme and aid to nursery shall be given to Women, SC and ST, respectively.
4. Joint Director of Horticulture, plantation crops, Lalbagh, Bangalore-4 (Ph: 26573790) will be responsible to report monthly scheme wise physical and financial achievement under the Coconut Development Board programmes to the Coconut Development Board and to the Government by 10$^{th}$ of every succeeding month.
5. The details of components to be implemented under State sector and district sector will be furnished by the Director of Horticulture to the Coconut Development Board under intimation to the Government.

By order and in the name of Governor of Karnataka

**S.RAJU**

P.R. 1398

Under Secretary to Government,

Horticulture, Agriculture & Horticulture Department.

**Sub :** National Co-operative Development Corporation Sponsored Scheme – Expansion of Fruits and Vegetables marketing activities of HOPCOMS - Repayment of loan to NCDC - Reg.

**Read :** 1) Government Order No. AHD 71 HPP 1992 dt.14-2-1993

2) Letter No. NCDC/A & C/X(1)/Rep/2000-02/565(iv) dt.14-07-2006

3) Letter of Director of Horticulture No. Thoe/Thasha/ Vini 1/47/94-95 dt. 2-8-2006.

**PREAMBLE**:

In the Government Order read at (1) above sanction was accorded for the implementation of National Co-operative Development Corporation assisted project for Expansion of Fruits and Vegetables Marketing Activities of Horticulture Producers Cooperative Marketing and Processing Society Ltd. (HOPCOMS), Bangalore at a total cost of Rs.440 lakhs. Accordingly, the State Government has contributed a sum of Rs. 198.00 lakh as share capital to HOPCOMS out of which Rs. 110.00 lakhs has been reimbursed by NCDC as loan to the State Government.

In the letter read at (2) above, NCDC has communicated that an instalment of Rs.5, 50,391 will be due for payment to the Corporation on or before 5-10-2006 against the loans advanced. NCDC has further informed that debit for timely repayment would be admissible for payment made on or before the due date i.e., 5.10.2006. This works out to be Rs.5, 49,203/-

The Director of Horticulture, Bangalore in the letter read at (3) above has submitted a proposal for the payment of loan instalment of Rs.5,49,203/- (Rs. 4,75,100/- as principal and Rs. 74,103/- as interest) to National Cooperative Development Corporation before 5-10-2005, seeking Government approval.

The proposal is examined and following order is passed.

**GOVERNMENT ORDER NO. AHD 152 HPP 2006, BANGALORE, dated 15th September 2006**

The Government is pleased to accord sanction for repayment of loan of Rs. 4,75,100/- as principal and Rs.74, 103/- as interest, together totaling to an amount of Rs. 5,49,203/- (Rupees Five lakhs forty nine Thousand two hundred and three only) to National Cooperative Development Corporation, New Delhi before 5.10.2006.

The expenditure towards the principal shall be debited to the Head of Account "6003-Internal Debts of the State Government 00-108-0-01" loans from National Cooperative Development Corporation (Non Plan) and the interest under the head of account "2049 Interest Payments 01-200-Interest on other Internal Debts 2- Interest on Loan from NCDC-03 Interest on Direct Loans from NCDC (Non Plan)".

This order issues as per of the powers delegated to Secretaries in the Government Order No. FD/1/TFP/96 dated 10-7-96.

By order and in the name of Governor of Karnataka

**S.RAJU**

P.R. 1399

Under Secretary to Government,

Agriculture & Horticulture Department.

**GOVERNMENT ORDER NO. AHD 152 HPP 2006, BANGALORE, dated 19th September 2006**

**Sub :** Withdrawal of the Government Order regarding.

The Government Order No.AHD 152 HPP 2006 dated 15.9.2006 has been **withdrawn** with immediate effect as the Institution of HOPCOMS is not under the administrative control of Department of Horticulture and there is no budgetary support provided for repayment of NCDC loan in the Horticulture Department budget.

By order and in the name of Governor of Karnataka

**S.RAJU**

P.R. 1459

Under Secretary to Government,

Agriculture & Horticulture Department.

**Sub :** Extension of NOVOD Board Sponsored Programme "Elite Nursery & Plantation and TBOs garden" sanctioned during 2004-05 for the year 2006-07 –regarding.

**Read :**
1) G.O No.AHD 125 HPP 2005 dated 17.01.2006.
2) NOVOD letter No.30-100/NOVOD/ 2004-2005/ dated 18.5.2006
3) Letter of the Director of Horticulture No.ತೋನಿ/ತೋಅನಿ/ ತಾಬೆಯೋ/ಸತೋಅ-1/2/06-07 dated 3.6.2006.

**PREAMBLE:**

The Director of Horticulture had been given approval for implementation of National Oil Seeds and Vegetable Oils Development Board (NOVOD), Ministry of Agriculture, Government of India sponsored project on "Tree Borne Oil Seeds" during 2005-06 vide Government Order read at (1) above. NOVOD had released an amount Rs.19.00 lakh during the year 2005-06 and the Director of Horticulture

has informed vide his letter read at (3) above that out of the released amount of Rs 19.00 lakh an amount of Rs3.48 lakhs is remaining unspent during 2005-2006 and he has requested the Government to release the said amount during 2006-07. NOVOD Board has agreed to continue the programme during 2006-07 for completion of the left over targets as per letter read at (2) above

This has been examined and it is ordered as below .

**GOVERNMENT ORDER NO.AHD 78 HPP 2006, BANGALORE, DATED 15th September 2006**

Government is pleased to agree to the proposal of Director of Horticulture to continue the NOVOD Board Sponsored Programme "Development of Elite Planting Material and Model Plantation" sanctioned during year 2006-07 at a cost of Rs.3.48 lakh (Rupees Three Lakh forty eight thousand Only). It will be implemented by Senior Assistant Director of Horticulture (State sector), Tumkur district for taking up activities at Indira Horticulture Farm, Badavanahalli, Madhugiri taluk, Tumkur district.

The Project will be implemented strictly in accordance with the terms and conditions stipulated by NOVOD and purchases if any will be made strictly in accordance with Karnataka Transparency in Public Procurement Act 1999. The Director of Horticulture shall submit progress report of the said programme to the NOVOD every month in the prescribed format and the utilization certificate immediately after the completion of the programme as prescribed by NOVOD under intimation to the Government.

The amount so sanctioned will first be released from out of Contingent Fund, Head of Account 8000-00-251-0-00, Crop Husbandry and later it will be recouped to the Fund by Supplementary Estimates from Head of Account 2401-00-114-0-02-059 (Plan). This is only an Administrative Order and funds shall not be drawn unless a separate order is issued by the Finance Department releasing the budget from out of Contingent Fund. The Drawing Officer shall present the bill to the Treasury for drawl of funds from Contingent Fund along with a separate Order to be issued by the Finance Department only then the Treasury shall take action to release the funds.

This order issues with the concurrence of the Finance Department as per its Note No. ಆಇ 431 ವೆಚ್ಚ -4/06 dated 24.8.2006.

By order and in the name of Governor of Karnataka
**S.RAJU**
Under Secretary to Government,
Agriculture & Horticulture Department.

P.R. 1458

**Sub :** Constitution of Committee to review the progress of National Horticulture Mission programmes.

**Read :** 1) G.O No.AHD 99 HPP 2005 dated 16.6.2005.
2) Government of India letter D.O No.33-8/2005-Hort. dated 11.9.2006.

**PREAMBLE:**

National Horticulture Mission is launched during 2005-06 for the holistic development of Horticulture sector duly ensuring end to end approach having backward and forward linkages covering production, post harvest management, processing and marketing, with the active participation of all stake-holders. Implementation of the National Horticulture Mission programmes in Karnataka State is taken up by Karnataka State Horticulture Mission Agency, setup as per Government Order read at (1) above.

National Horticulture Mission programmes in the State are being coordinated by a State Level Executive Committee (SLEC) constituted under the Chairmanship of Hon'ble Minister for Horticulture. Government of India in its letter referred at (2) has informed that there is a need to have a mechanism for more intensive review of Mission programmes, which could be done by another Committee under the Chairmanship of Agriculture Production Commissioner or Principal Secretary, Horticulture. This Committee shall constantly and regularly review the progress made under National Horticulture Mission programme in the State. The State Level Executive Committee (SLEC) constituted under the Chairmanship of Hon'ble Minister for Horticulture could provide policy directions. Therefore the following order.

**Government Order No. AHD 179 HPP 2006, Bangalore, Dated: 9th October 2006.**

Government is pleased to constitute a Review Committee under the Chairmanship of Additional Chief Secretary and Development Commissioner to review the implementation and progress of National Horticulture Mission programmes. The Committee would oversee the day-to-day functioning of National Horticulture Mission programme in the State. The composition of the said Committee will be as given below;

| | | |
|---|---|---|
| 1. | Additional Chief Secretary and Development Commissioner | Chairman |
| 2. | Additional Chief Secretary & Principal Secretary to Govt., Planning Department or his/her representative not below the rank of Director concerned | Member |
| 3. | Principal Secretary to Govt., Finance Department or his representative not below the rank of Secretary (Exp.) | Member |
| 4. | Principal Secretary to Govt.,(Horti.) Agriculture & Horticulture Department | Member |
| 5. | Director of Horticulture, (Mission Director, Karnataka) | Member |
| 6. | Executive Director of State Horticulture Mission | Member |
| 7. | Joint Director of Horticulture (Planning) | Member-Secretary |

This order issues with the concurrence of the Chief Secretary and Additional Chief Secretary and Development Commissioner vide note No.CS/8734/Comp/06 dated 3.10.2006.

By order and in the name of Governor of Karnataka

**S.RAJU**

P.R. 1521

Under Secretary to Government,
Horticulture, Agriculture & Horticulture Department.

**ವಿಷಯ:** ಶ್ರೀ ಎಸ್.ಪರಶಿವಮೂರ್ತಿ, ಸಹಾಯಕ ಸರ್ಕಾರಿ ಅಭಿಯೋಜಕರು, ಗೌರಿಬಿದನೂರು ಹಾಲಿ ಕನಕಪುರ ಇವರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಿ, ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವೆಂದು ಘೋಷಣೆ ಮಾಡುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಲಾ 161 ಪಿಪಿಇ 86, ದಿನಾಂಕ 24.7.1989
2. ಸರ್ಕಾರದ ಆದೇಶ ನಂ. ಲಾ 186 ಪಿಪಿಇ 91, ದಿನಾಂಕ 16.12.1991.
3. ಸರ್ಕಾರದ ಆದೇಶ ನಂ. ಲಾ 173 ಪಿಪಿಇ 94, ದಿನಾಂಕ 22.08.94
4. ಸರ್ಕಾರದ ಆದೇಶ ನಂ. ಲಾ 173 ಪಿಪಿಇ 94, ದಿನಾಂಕ 18.1.1996
5. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎಸ್ / ಸಿಶಾ-1/17/2000-2001, ದಿನಾಂಕ 13.04.2000
6. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎಸ್ / ಸಿಶಾ-1/17/2000-2001, ದಿನಾಂಕ 27.06.2005

**ಪ್ರಸ್ತಾವನೆ:**

ಶ್ರೀ ಎಸ್.ಪರಶಿವಮೂರ್ತಿ ಇವರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆಯನ್ವಯ ನೇರ ನೇಮಕಾತಿ ಮೂಲಕ ಎರಡು ವರ್ಷಗಳ ಅವಧಿಯ ಪರೀಕ್ಷಾ ಪೂರ್ವಾವಧಿಯ ಮೇರೆಗೆ ಸಹಾಯಕ ಸರ್ಕಾರಿ ಅಭಿಯೋಜಕರು/ಸಹಾಯಕ ಸರ್ಕಾರಿ ವಕೀಲರು ಹುದ್ದೆಯಲ್ಲಿ ನೇಮಕಗೊಂಡಿರುತ್ತಾರೆ. ಇವರು ಸದರಿ ಹುದ್ದೆಯಲ್ಲಿ ದಿನಾಂಕ 04.08.1989ರ ಪೂರ್ವಾಹ್ನ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಸದರಿ ಅಧಿಕಾರಿಯವರ ದಿನಾಂಕ 03.08.1991ರ ಅಪರಾಹ್ನದಂದು ಪರೀಕ್ಷಾ ಪೂರ್ವಾವಧಿ ಪೂರ್ಣಗೊಂಡಿರುತ್ತದೆ. ಅವರ ಹುದ್ದೆಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳನ್ನು ಅವರು ಎರಡು ವರ್ಷಗಳ ಪರಿವೀಕ್ಷಣಾ ಅವಧಿಯಲ್ಲಿ ಪಾಸು ಮಾಡದಿದ್ದ ಕಾರಣ ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಇವರ ಪರಿವೀಕ್ಷಣಾ ಅವಧಿಯನ್ನು ಒಂದು ವರ್ಷದವರೆಗೆ ಮುಂದುವರೆಸಲಾಗಿತ್ತು.

ಸದರಿ ಅಧಿಕಾರಿಯವರು ಇಲಾಖಾ ಪರೀಕ್ಷೆಗಳಾದ ಅಕೌಂಟ್ಸ್ ಹೈಯರ್ ಅನ್ನು ದಿನಾಂಕ 01.06.1994 ರಂದು ಜನರಲ್ ಲಾ ಭಾಗ-1, ಪೇಪರ್-2 ಅನ್ನು ಅಂತಿಮವಾಗಿ 04.05.1995ರಂದು ಪಾಸು ಮಾಡಿದ್ದು, ಎಸ್.ಎಸ್.ಎಲ್.ಸಿ ಯಲ್ಲಿ ಕನ್ನಡವನ್ನು ಪ್ರಥಮ ಭಾಷೆಯನ್ನಾಗಿ ಪಡೆದು ಪಾಸು ಮಾಡಿರುವುದರಿಂದ ಸದರಿ ಅಧಿಕಾರಿಯವರಿಗೆ ಕನ್ನಡ ಭಾಷಾ ಪರೀಕ್ಷೆ ವಿನಾಯಿತಿಯನ್ನು ನೀಡಲಾಗಿದೆ. ಆದುದರಿಂದ ದಿನಾಂಕ 04.08.1992ರಿಂದ 03.05.1995ರವರೆಗೆ ಪರಿವೀಕ್ಷಣಾ ಅವಧಿಯನ್ನು ಮುಂದುವರೆಸಬೇಕಾಗಿರುತ್ತದೆ.

ಪರಿವೀಕ್ಷಣಾ ಅವಧಿಯಲ್ಲಿ ಇವರ ವಿರುದ್ದ ಲಂಚ ನಿರೋಧ ಕಾಯ್ದೆ ಕಲಂ 7, 13(1)(ಡಿ) ಹಾಗೂ 13(2)ರ ಕೆಳಗೆ ಮಡಿಕೇರಿಯ ಲೋಕಾಯುಕ್ತ ಪೋಲೀಸ್ ಠಾಣಾ ಕ್ರೈಂ ನಂ.5/94ರ ಕೆಳಗೆ ಪ್ರಕರಣವು ದಾಖಲಾಗಿದ್ದರಿಂದ ಮೇಲೆ ಓದಲಾದ (3)ರ ಸರ್ಕಾರದ ಆದೇಶದಲ್ಲಿ ದಿನಾಂಕ 22.8.1994ರಿಂದ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.

ಮೇಲೆ ಓದಲಾದ (4)ರ ಸರ್ಕಾರದ ಆದೇಶದಲ್ಲಿ ಶ್ರೀ ಎಸ್.ಪರಶಿವಮೂರ್ತಿ ಇವರ ಅಮಾನತ್ತು ಆದೇಶವನ್ನು ಅಭಿಯೋಜನದ ವಿಷಯ (Prosecution) ಬಾಕಿ ಇಟ್ಟು, ರದ್ದು ಗೊಳಿಸಿ, ಸದರಿ ಅಧಿಕಾರಿಯವರನ್ನು ಗೌರಿಬಿದನೂರು ಮುನ್ಸೀಫ್ ಮತ್ತು ಜೆಎಂಎಫ್‌ಸಿ ನ್ಯಾಯಾಲಯಕ್ಕೆ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕಾತಿಯನ್ನು ಮುಂದಿನ ಆದೇಶದವರಿಗೆ ಮಾಡಲಾಗಿತ್ತು.

ದಿನಾಂಕ 08.12.2003ರಂದು ಕೊಡಗು ಸೆಷನ್ಸ್ ನ್ಯಾಯಾಲಯವು ಶ್ರೀ ಎಸ್.ಪರಶಿವಮೂರ್ತಿ ಇವರನ್ನು ಆರೋಪದಿಂದ ಮುಕ್ತಾಯಗೊಳಿಸಿದೆ.

ಸದರಿ ಅಧಿಕಾರಿಯವರು ಹುದ್ದೆಗೆ ನಿಗಧಿಪಡಿಸಿದ ಎಲ್ಲಾ ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡಿರುವುದರಿಂದ ಇವರ ಪರಿವೀಕ್ಷಣಾ ಅವಧಿಯನ್ನು ಪ್ರಥಮ ಹಂತದಲ್ಲಿ ದಿನಾಂಕ 03.05.95ರವರೆಗೆ ವಿಸ್ತರಿಸಿ, ನಂತರ ಇವರು ಅಂತಿಮವಾಗಿ ಪಾಸು ಮಾಡಿದ ಜನರಲ್ ಲಾ ಭಾಗ-1, ಪೇಪರ್-2 ಇಲಾಖಾ ಪರೀಕ್ಷೆಯ ಫಲಿತಾಂಶವನ್ನು ಪ್ರಕಟಿಸಿದ ದಿನಾಂಕವಾದ 04.05.1995ರಿಂದ ಅವರ ಪರೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವಂತೆ ಮೇಲೆ ಓದಲಾದ (5) ಮತ್ತು (6) ರಲ್ಲಿ ಅಭಿಯೋಗ ನಿರ್ದೇಶಕರು ಕೋರಿರುತ್ತಾರೆ.

**ಸರ್ಕಾರದ ಆದೇಶ ನಂ. ಒಇ 661 ಪಿಪಿಇ 2005, ಬೆಂಗಳೂರು, ದಿನಾಂಕ 1ನೇ ಸೆಪ್ಟೆಂಬರ್, 2006.**

ಪ್ರಸ್ತಾವನೆಯಲ್ಲಿನ ವಿಷಯವನ್ನು ಸರ್ಕಾರವು ಪರಿಶೀಲಿಸಿ, ಶ್ರೀ ಎಸ್.ಪರಶಿವಮೂರ್ತಿ, ಸಹಾಯಕ ಸರ್ಕಾರಿ ಅಭಿಯೋಜಕರು, ಗೌರಿಬಿದನೂರು ಹಾಲಿ ಕನಕಪುರ ಇವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ 04.08.1992ರಿಂದ 03.05.1995ರವರೆಗೆ ಕೆ.ಸಿ.ಎಸ್(ಪರಿವೀಕ್ಷಣೆ) ನಿಯಮಗಳು 1977ರ 4ನೇ ನಿಯಮದ ಉಪನಿಯಮ(1)ಕ್ಕೆ ಅನುಗುಣವಾಗಿ ವಿಸ್ತರಿಸಿದೆ ಹಾಗೂ ಇವರ ಪರಿವೀಕ್ಷಣಾ ಅವಧಿಯನ್ನು 1977ರ ಕರ್ನಾಟಕ ಸಿವಿಲ್ ಸೇವೆಗಳು (ಪರಿವೀಕ್ಷಣಾ) ನಿಯಮಗಳ ನಿಯಮ 5(1)(ಎ) ರನ್ವಯ ದಿನಾಂಕ 04.05.1995ರಂದು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನಿಸಾರ್ ಅಹಮದ್**

ಪಿ.ಆರ್. 1340

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ. ಮತ್ತು ಸು. ಮತ್ತು ಅಭಿಯೋಗಗಳು)

## ಆರ್ಥಿಕ ಸಚಿವಾಲಯ

ಆದೇಶ ಸಂಖ್ಯೆ: ಆಇ(ವಿಶೇಷ) 13 ಸಿಪಿಪಿ 2006, ಬೆಂಗಳೂರು, ದಿನಾಂಕ: 6ನೇ ಅಕ್ಟೋಬರ್ 2006

ವಿಷಯ: ನಿವೃತ್ತಿ ವೇತನದಾರರಿಗೆ ಮತ್ತು ಕುಟುಂಬ ನಿವೃತ್ತಿ ವೇತನದಾರರಿಗೆ ತುಟ್ಟಿಭತ್ಯೆ ದರಗಳ ಪರಿಷ್ಕರಣೆ.

ಓದಲಾಗಿದೆ: ಸರ್ಕಾರದ ಆದೇಶ ಸಂಖ್ಯೆ: ಆಇ (ವಿಶೇಷ) 13 ಸಿಪಿಪಿ 2006 ದಿನಾಂಕ: 3.5.2006.

ರಾಜ್ಯದ ಸಂಚಿತ ನಿಧಿಯಿಂದ ನಿವೃತ್ತಿ ವೇತನ ಮತ್ತು ಕುಟುಂಬ ನಿವೃತ್ತಿ ವೇತನವನ್ನು ಪಡೆಯುತ್ತಿರುವಂತಹ ರಾಜ್ಯ ಸರ್ಕಾರದ ನಿವೃತ್ತಿ ವೇತನದಾರರು/ಕುಟುಂಬ ನಿವೃತ್ತಿ ವೇತನದಾರರಿಗೆ ಮತ್ತು ಅನುದಾನಿತ ಶಿಕ್ಷಣ ಸಂಸ್ಥೆಗಳ ನಿವೃತ್ತಿ ವೇತನದಾರರು/ಕುಟುಂಬ ನಿವೃತ್ತಿ ವೇತನದಾರರಿಗೆ ಹಾಲಿ ಲಭ್ಯವಿರುವ ತುಟ್ಟಿಭತ್ಯೆಯ ದರವನ್ನು ಮೂಲ ನಿವೃತ್ತಿ ವೇತನ/ಕುಟುಂಬ ನಿವೃತ್ತಿ ವೇತನದ ಶೇಕಡ 74 ರಿಂದ ಶೇಕಡ 79ಕ್ಕೆ ಹೆಚ್ಚಿಸಿ ದಿನಾಂಕ:1.7.2006 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ಸರ್ಕಾರವು ಹರ್ಷಿಸುತ್ತದೆ.

2. ಈ ಆದೇಶದಿಂದಾಗಿ ಪಾವತಿಸಬೇಕಾದ ತುಟ್ಟಿಭತ್ಯೆಯ ಮೊತ್ತದಲ್ಲಿ ಐವತ್ತು ಪೈಸೆ ಹಾಗೂ ಅದಕ್ಕಿಂತ ಹೆಚ್ಚಿನ ಭಿನ್ನಾಂಶಗಳನ್ನು ಮುಂದಿನ ರೂಪಾಯಿಗೆ ಪೂರ್ಣಗೊಳಿಸತಕ್ಕದ್ದು ಮತ್ತು ಐವತ್ತು ಪೈಸೆಗಿಂತ ಕಡಿಮೆ ಇರುವ ಭಿನ್ನಾಂಶಗಳನ್ನು ಕಡೆಗಣಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಡಿ.ಎಸ್. ಮುರಳಿ ಕೃಷ್ಣ

ವಿಶೇಷಾಧಿಕಾರಿ (ವಿಶ್ರಾಂತಿ ವೇತನ) ಆರ್ಥಿಕ ಇಲಾಖೆ.

## FINANCE SECRETARIAT

**Order No. FD (SPL) 13 CPP 2006, Bangalore, Dated: 6th October 2006**

**Sub :** Dearness Allowance to pensioners/family pensioners - Revision of rates.

**Read :** Government Order No. FD (Spl) 13 CPP 2006 dated: 3.5.2006.

Government are pleased to sanction with effect from 1.7.2006, further increase in the rates of Dearness Allowance from existing 74% to 79% of basic pension/family pension to the State Government pensioners/family pensioners and pensioners/family pensioners of the aided educational institutions whose pension/family pension is paid out of the Consolidated Fund of the State.

2. The payment on account of the increase in Dearness Allowance as per this order involving fractions of 50 paise and above shall be rounded off to the next rupee and fractions less than 50 paise shall be ignored.

By order and in the name of Governor of Karnataka

P.R. 1534

**D.S. MURALI KRISHNA**

Special Officer (Pension), Finance Department.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಕೆ. ನಾಗರಾಜ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರ ವಿರುದ್ಧ ಶಿಸ್ತು ಕ್ರಮ ಪ್ರಾರಂಭಿಸುವಂತೆ ಕೋರಿ ಸಲ್ಲಿಸಲಾಗಿದ್ದ ಲೋಕಾಯುಕ್ತರ ವರದಿಯನ್ನು ಒಪ್ಪದೆ ಶಿಸ್ತು ಕ್ರಮದಿಂದ ಅವರ ಹೆಸರನ್ನು ಕೈಬಿಡುವ ಬಗ್ಗೆ.

**ಓದಲಾಗಿದೆ:** ಸನ್ಮಾನ್ಯ ಲೋಕಾಯುಕ್ತ ಅವರು 1984ರ ಕರ್ನಾಟಕ ಲೋಕಾಯುಕ್ತ ಕಾಯ್ದೆ ಕಲಂ 12(3)ರನ್ವಯ ಸಲ್ಲಿಸಿದ ವರದಿ ಕ್ರಮಾಂಕ:ಕಂಪ್ಲೆಂಟ್/ಲೋಕ್/ಬಿಡಿ/25/99-2000/ಎಆರ್‌೩/2 ದಿನಾಂಕ:27.3.01

**ಪ್ರಸ್ತಾವನೆ:**

ಶ್ರೀ ಕೆ.ನಾಗರಾಜ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರು 1998-99ನೇ ಸಾಲಿನಲ್ಲಿ ದೊಡ್ಡಬಳ್ಳಾಪುರ ಉಪ ವಿಭಾಗಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಹೊಸಕೋಟೆ ಪುರಸಭೆಯ ಮುಖ್ಯಾಧಿಕಾರಿ ಶ್ರೀ ಎಸ್. ಪ್ರಭುದೇವ ಹಾಗೂ ಕರ ನಿರ್ಧರಣೆ ಅಧಿಕಾರಿ ಶ್ರೀ ವೆಂಕಟರಮಣ ಶೆಟ್ಟಿ ಅವರುಗಳೊಡನೆ ಷಾಮೀಲಾಗಿ ತಮ್ಮ ಆಸ್ತಿ ತೆರಿಗೆಯನ್ನು ಅಕ್ರಮವಾಗಿ ಹೆಚ್ಚಿಸಿದ್ದರ ವಿರುದ್ಧ ತಾವು ಸಲ್ಲಿಸಿದ ದಿ:18.5.99ರ ಮೇಲ್ಮನವಿಯನ್ನು ನಿಯಮಗಳ ಅನುಸಾರ ಪರಿಶೀಲಿಸದೇ ತಮಗೆ ಕಿರುಕುಳ ನೀಡಿರುವುದಾಗಿ ಆರೋಪಿಸಿ ಶ್ರೀಮತಿ ಉಷಾದೇವಿ ಕೋಂ ಉಮ್‌ಶಂಕರ್ ಜಾ, ಹೊಸಕೋಟೆ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಅವರು ದಿ:7.8.99 ರಂದು ಲೋಕಾಯುಕ್ತಕ್ಕೆ 1984ರ ಕರ್ನಾಟಕ ಲೋಕಾಯುಕ್ತ ಕಾಯ್ದೆ ಕಲಂ 7(2ಎ) ರನ್ವಯ ದೂರನ್ನು ಸಲ್ಲಿಸಿದ್ದರು. ಸದರಿ ದೂರಿನ ಮೇರೆಗೆ ಸನ್ಮಾನ್ಯ ಲೋಕಾಯುಕ್ತರವರು ಪ್ರಾಥಮಿಕ ತನಿಖೆ ನಡೆಸಿ ಅವರುಗಳ ವಿರುದ್ಧ ಮಾಡಲಾದ ಆರೋಪವು ಮೇಲ್ನೋಟಕ್ಕೆ ಸಾಬೀತಾಗಿದೆಯೆಂದು ಅಭಿಪ್ರಾಯ ಪಟ್ಟು ಮೇಲ್ಕಂಡ ಆಪಾದಿತ ಅಧಿಕಾರಿಗಳ ವಿರುದ್ಧ ಮಾಡಲಾದ ಆರೋಪಗಳ ಕುರಿತಂತೆ ಪೂರ್ಣ ಪ್ರಮಾಣದ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಸನ್ಮಾನ್ಯ ಲೋಕಾಯುಕ್ತರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 14ಎ ರನ್ವಯ ವಹಿಸುವಂತೆ ಲೋಕಾಯುಕ್ತರು ದಿ:27.3.01ರಂದು ಸಲ್ಲಿಸಿರುವ 1984ರ ಕರ್ನಾಟಕ ಲೋಕಾಯುಕ್ತ ಕಾಯ್ದೆ ಕಲಂ 12(3)ರ ವರದಿಯಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಸನ್ಮಾನ್ಯ ಲೋಕಾಯುಕ್ತರ ದಿ:27.3.01ರ ಶಿಫಾರಸ್ಸನ್ನು ಸರ್ಕಾರ ಕೂಲಂಕಷವಾಗಿ ಪರಿಶೀಲಿಸಿ, ದೊಡ್ಡಬಳ್ಳಾಪುರ ಉಪ ವಿಭಾಗದ ಅಂದಿನ ಉಪವಿಭಾಗಾಧಿಕಾರಿಯಾದ ಶ್ರೀ ಕೆ. ನಾಗರಾಜ್, ಕೆಎಎಸ್ ಅಧಿಕಾರಿ ಅವರು 1964ರ ಪುರಸಭೆಗಳ ಕಾಯ್ದೆಯಡಿಯಲ್ಲಿ ನಿರ್ಧರಿಸುವ ಕರ ನಿರ್ಧರಣೆಯ ವಿರುದ್ಧ ಅದೇ ಕಾಯ್ದೆಯ ಕಲಂ 106ರಡಿಯಲ್ಲಿ ಸಂಬಂಧಪಟ್ಟ ಉಪ ವಿಭಾಗಾಧಿಕಾರಿಗಳಿಗೆ ಮೇಲ್ಮನವಿ ಸಲ್ಲಿಸಲು ಅವಕಾಶ ಇರುತ್ತದೆ. ತಿಳುವಳಿಕೆ ನೀಡಿದ 30 ದಿನಗಳ ಒಳಗಾಗಿ ಸಂಬಧಪಟ್ಟ ಉಪ ವಿಭಾಧಿಕಾರಿಗಳಿಗೆ ಮೇಲ್ಮನವಿ ಸಲ್ಲಿಸಬೇಕಾಗಿರುತ್ತದೆ. ಈ ಪ್ರಕರಣದಲ್ಲಿ ದೂರುದಾರರಾದ ಶ್ರೀಮತಿ ಉಷಾದೇವಿ ಜಾ ಅವರಿಗೆ ಪರಿಷ್ಕೃತ ಕರ ನಿರ್ಧರಣೆ ಮಾಡಿದ್ದಕ್ಕೆ ದಿ:29.11.96, 14.12.96 ಮತ್ತು 29.11.96ರಂದು ವಿಶೇಷ ನೋಟೀಸುಗಳನ್ನು ಜಾರಿ ಮಾಡಿದ್ದರೂ ದೂರುದಾರರು ನಿಗಧಿತ ಅವಧಿಯೊಳಗೆ ಮೇಲ್ಮನವಿ ಸಲ್ಲಿಸದೆ ಅವಧಿ ಮೀರಿದ ನಂತರ ಅಂದರೆ ದಿ:16.3.99, 19.5.99 ಮತ್ತು 1.7.99ರಲ್ಲಿ ಮೇಲ್ಮನವಿಗಳನ್ನು ಸಲ್ಲಿಸಿರುತ್ತಾರೆ. ಈ ಮೇಲ್ಮನವಿಗಳನ್ನು ನಿಗಧಿತ ಅವಧಿಯೊಳಗೆ ಸಲ್ಲಿಸದೇ ಇರುವ ಪ್ರಯುಕ್ತ ಅವುಗಳನ್ನು ಸೂಕ್ತ ಕ್ರಮಕ್ಕಾಗಿ ಪುರಸಭೆ ಅಧಿಕಾರಿಗಳಿಗೆ ರವಾನಿಸಿರುವುದನ್ನು ಗಮನಿಸಲಾಗಿದೆ.ಇದರಿಂದಾಗಿ ಉಪ ವಿಭಾಧಿಕಾರಿಯವರು ಕೈಗೊಂಡಿರುವ ಕ್ರಮ ಕಾಯ್ದೆ ರೀತ್ಯ ಸಮಂಜಸವಾಗಿ ಹಾಗೂ ಕರ್ನಾಟಕ ಪುರಸಭೆ ಕಾಯ್ದೆಯ ಕಲಂ 106ತಡಿಯಲ್ಲಿ ದೂರುದಾರರ ಮೇಲ್ಮನವಿಯನ್ನು ಪರಿಶೀಲಿಸುವಲ್ಲಿ ಕಾಯ್ದೆಯನ್ನು ಉಲ್ಲಂಘಿಸಿರುವುದು ಕಂಡು ಬಂದಿರುವುದಿಲ್ಲವಾದ್ದರಿಂದ ಆಪಾದಿತ ಅಧಿಕಾರಿ ಶ್ರೀ ಕೆ. ನಾಗರಾಜ್, ಕೆಎಎಸ್ ಅಧಿಕಾರಿ ಅವರ ವಿಷಯವಾಗಿ ಮಾತ್ರ ಲೋಕಾಯುಕ್ತರು 1984ರ ಕರ್ನಾಟಕ ಲೋಕಾಯುಕ್ತ ಕಾಯ್ದೆ ಕಲಂ 12(3) ರಡಿಯಲ್ಲಿ ಮಾಡಿರುವ ಶಿಫಾರಸ್ಸನ್ನು ಒಪ್ಪದೇ ಇರಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 80 ಎಸ್‌ಇಎನ್ 2001 ಬೆಂಗಳೂರು, ದಿನಾಂಕ: 13ನೇ ಅಕ್ಟೋಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಸರ್ಕಾರವು ಆಪಾದಿತ ಅಧಿಕಾರಿ ಶ್ರೀ ಕೆ. ನಾಗರಾಜ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಹಿಂದಿನ ಉಪವಿಭಾಗಾಧಿಕಾರಿ, ದೊಡ್ಡಬಳ್ಳಾಪುರ ಉಪ ವಿಭಾಗ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ತಮಗೆ ವಹಿಸುವಂತೆ 1984ರ ಕರ್ನಾಟಕ ಲೋಕಾಯುಕ್ತ ಕಾಯ್ದೆ ಕಲಂ12(3) ರಡಿಯಲ್ಲಿ ಮಾನ್ಯ ಲೋಕಾಯುಕ್ತರವರು ಮಾಡಿದ ದಿ:27.3.01ರ ಶಿಫಾರಸ್ಸನ್ನು ಅವರ ಮಟ್ಟಿಗೆ ಮಾತ್ರ ಒಪ್ಪದಿರಲು ತೀರ್ಮಾನಿಸಿದೆ.'

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 1516

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3)

## ಸಹಕಾರ ಸಚಿವಾಲಯ

**ವಿಷಯ:** ಭದ್ರಾ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ದೊಡ್ಡಬಾತಿ ಇದರ 2004-05 ಮತ್ತು 2005-06ನೇ ಸಾಲಿನ ವಾರ್ಷಿಕ ಮಹಾಸಭೆಗಳನ್ನು ನಡೆಸಲು ಮಾರ್ಚ್ 2007ರವರೆಗೆ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**

1. ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಪತ್ರ ಸಂಖ್ಯೆ ಡಿಎಸ್‌ಕೆ/ ಇಎಸ್‌ಟಿಎಸ್/90/2003-04 ದಿನಾಂಕ:31.8.2006
2. ಅಧ್ಯಕ್ಷರು, ಭದ್ರಾ ಸಹಕಾರಿ ಸಕ್ಕರೆ ಕಾರ್ಖಾನೆ ಇವರ ಪತ್ರ ಸಂಖ್ಯೆ:ಭಸಸಕಾನಿ/ಆಡಳಿತ ವಿಭಾಗ/2006-07, ದಿನಾಂಕ:29.9.2006.

**ಪ್ರಸ್ತಾವನೆ:**

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಮೇಲೆ ಓದಲಾದ (1)ರ ಪ್ರಸ್ತಾವನೆಯಲ್ಲಿ, ಭದ್ರಾ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ದೊಡ್ಡಬಾತಿ ಇದರ 2004-05ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ನಡೆಸಲು ದಿನಾಂಕ:30.9.2006ರವರೆಗೆ ಕಾಲಾವಕಾಶ ವಿಸ್ತರಿಸಿ ಆದೇಶಿಸಲಾಗಿತ್ತು, ಹಾಗೂ 2004-05 ಮತ್ತು 2005-06ನೇ ಸಾಲಿನ ವಾರ್ಷಿಕ ಮಹಾಸಭೆಗಳನ್ನು ನಡೆಸಲು ಕಾರ್ಖಾನೆಯಲ್ಲಿ ಹಣಕಾಸಿನ ಅನಾನುಕೂಲವಿರುವುದರಿಂದ ಎರಡೂ ಸಾಲುಗಳ ಮಹಾಸಭೆಗಳನ್ನು ನಡೆಸಲು 6 ತಿಂಗಳ ಅವಧಿಗೆ ಮುಂದೂಡುವ ಕುರಿತು ಕಾಲಾವಕಾಶ ನೀಡಲು ಕೋರಿ ಕಾರ್ಖಾನೆಯ ಆಡಳಿತ ಮಂಡಳಿಯ ದಿನಾಂಕ:24.6.2006ರ ಠರಾವಿನೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುವುದಾಗಿ, ಹಾಗೂ ಪ್ರಸ್ತುತ ಕಾರ್ಖಾನೆಯಲ್ಲಿ ಹಣಕಾಸಿನ ಮುಗ್ಗಟ್ಟು ಇರುವುದರಿಂದ 2004-05 ಮತ್ತು 2005-06ನೇ ಸಾಲುಗಳ ವಾರ್ಷಿಕ ಮಹಾ ಸಭೆಗಳನ್ನು

ದಿನಾಂಕ:31.3.2007ರವರೆಗೆ ಅವಧಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 121ರಡಿ ವಿಸ್ತರಿಸುವಂತೆ ಕೋರಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, 2004-05 ಮತ್ತು 2005-06ನೇ ಸಾಲುಗಳ ವಾರ್ಷಿಕ ಮಹಾ ಸಭೆಗಳನ್ನು ದಿನಾಂಕ:30.9.2006 ರೊಳಗೆ ನಡೆಸುವಂತೆ ಸರ್ಕಾರದ ಪತ್ರ ಸಂ:ಸಇ 203 ಸಸಕಾ 2006, ದಿನಾಂಕ:28.9.2006ರಲ್ಲಿ ಆದೇಶಿಸಲಾಗಿತ್ತು.

ಅಧ್ಯಕ್ಷರು, ಭದ್ರಾ ಸಹಕಾರಿ ಸಕ್ಕರೆ ಕಾರ್ಖಾನೆ (ನಿ), ದೊಡ್ಡಬಾತಿ ಇವರು ಮೇಲೆ ಓದಲಾದ (2)ರ ಪತ್ರದಲ್ಲಿ, ಕಾರ್ಖಾನೆಯ ವಾರ್ಷಿಕ ಮಹಾಸಭೆ ನಡೆಸುವ ಬಗ್ಗೆ ಸೂಕ್ತ ತಯಾರಿ ಮಾಡಿಕೊಳ್ಳಲು ಸಾಧ್ಯವಾಗಿರುವುದಿಲ್ಲ. ಮತ್ತು ಸಹಕಾರ ಸಂಘಗಳ ಕಾನೂನು ಹಾಗೂ ನಿಯಮಗಳನ್ವಯ ಸದಸ್ಯರಿಗೆ ಮಹಾಸಭೆಯ ನೋಟೀಸು ಸಹ ನೀಡಲು ಕಾಲಾವಕಾಶವಿರುವುದಿಲ್ಲ ಮತ್ತು ಕಾರ್ಖಾನೆಯನ್ನು ಗುತ್ತಿಗೆ ನೀಡಲು, ಗುತ್ತಿಗೆ ಪ್ರಕ್ರಿಯೆ ಕೂಡ ಪ್ರಾರಂಭಗೊಂಡಿದ್ದು, ಪ್ರಸಕ್ತ ಸಿಬ್ಬಂದಿಯು ಪ್ರಕ್ರಿಯೆಯಲ್ಲಿ ತೊಡಗಿರುವುದರಿಂದ ಪತ್ರ ಸಂಖ್ಯೆ:ಸಇ 203 ಸಸಕಾ 2006, ದಿನಾಂಕ:28.9.2006ನ್ನು ಪುನರ್ ಪರಿಶೀಲಿಸಿ ಕಾರ್ಖಾನೆಗೆ 2004-05 ಹಾಗೂ 2005-06ನೇ ಸಾಲಿನ ವಾರ್ಷಿಕ ಮಹಾಸಭೆಗಳನ್ನು ನಡೆಸಲು ದಿನಾಂಕ:31.3.2007ರವರೆಗೆ ಕಾಲಾವಕಾಶ ನೀಡಲು ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಅದರಂತೆ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಇ 203 ಸಸಕಾ 2006, ಬೆಂಗಳೂರು, ದಿನಾಂಕ: 7ನೇ ಅಕ್ಟೋಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು, ಭದ್ರಾ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ದೊಡ್ಡಬಾತಿ ಇದರ 2004-05 ಮತ್ತು 2005-06ನೇ ಸಾಲಿನ ವಾರ್ಷಿಕ ಮಹಾಸಭೆಗಳನ್ನು ನಡೆಸಲು ದಿನಾಂಕ:31.3.2005ರವರೆಗೆ ಕಾಲಾವಕಾಶ ನೀಡಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಗಳು ಈ ಕೆಳಗಿನ ಮಾರ್ಪಾಟುಗಳೊಂದಿಗೆ ಅನ್ವಯವಾಗುತ್ತದೆ ಎಂದು ನಿರ್ದೇಶಿಸುತ್ತದೆ. ಎಂದರೆ

**27ರ ಪ್ರಕರಣದಲ್ಲಿ:** 27ನೇ ಪ್ರಕರಣದ ಉಪ ಪ್ರಕರಣ (1) ಪರಂತುಕದಲ್ಲಿನ ಆರು ತಿಂಗಳು ಎಂಬ ಪದಗಳಿಗೆ ಬದಲಾಗಿ ಹದಿನೆಂಟು ತಿಂಗಳು ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ 27(1)ಕ್ಕೆ ಮಾಡಿದ ಮಾರ್ಪಾಡು ದಿನಾಂಕ:31.3.2007ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1)ಕ್ಕೆ ಪ್ರಕರಣದ ಉಪಬಂಧಕಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರಪುರಕರ್ ವೆಂಕಟೇಶ್**

ಪಿ.ಆರ್. 1518

ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಮೈಸೂರು ಸಕ್ಕರೆ ಕಾರ್ಖಾನೆ (ನಿ) ಇದರ ಪುನರುಜ್ಜೀವನಕ್ಕೆ ಸರ್ಕಾರದಿಂದ ಆರ್ಥಿಕ ನೆರವು- ದುಡಿಯುವ ಬಂಡವಾಳ ಬಿಡುಗಡೆ ಬಗ್ಗೆ ಆಡಳಿತಾತ್ಮಕ ಆದೇಶ- ಮಾರ್ಪಾಡಿತ ಆದೇಶ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ:ಸಿಐ 202 ಎಸ್‌ಜಿಎಸ್ 04 ದಿ:6.5.2005.
2. ಸರ್ಕಾರದ ಆದೇಶ ಸಂಖ್ಯೆ:ಸಿಐ 153 ಎಸ್‌ಜಿಎಫ್ 05 ದಿ:24.8.2005.
3. ಸರ್ಕಾರದ ಆದೇಶ ಸಂಖ್ಯೆ: ಸಿಐ 34 ಎಸ್‌ಜಿಎಫ್ 05 ದಿ: 6.10.05.
4. ಸರ್ಕಾರದ ಆದೇಶ ಸಂಖ್ಯೆ:ಸಿಐ 34 ಎಸ್ ಜಿಎಫ್ 05 ದಿ:25.11.05.
5. ವ್ಯವಸ್ಥಾಪಕ ನಿರ್ದೇಶಕರು ಮೈಸೂರು ಸಕ್ಕರೆ ಕಾರ್ಖಾನೆ ರವರ ಪತ್ರ ಸಂಖ್ಯೆ: ಎಂಎಸ್‌ಸಿಓ /05/ಎಂಡಿ/(ಬಿಐಎಫ್ ಆರ್)/338 ದಿ:19.12.05.
6. ಸರ್ಕಾರದ ಆದೇಶ ಸಂಖ್ಯೆ :ಸಿಐ 34 ಎಸ್‌ಜಿಎಫ್ 05 ದಿ:3.8.06.
7. ವ್ಯವಸ್ಥಾಪಕ ನಿರ್ದೇಶಕರು ಮೈಸೂರು ಸಕ್ಕರೆ ಕಾರ್ಖಾನೆ ರವರ ಪತ್ರ ಸಂಖ್ಯೆ: ಎಂಎಸ್‌ಸಿಓ/06/ಎಂಡಿ/(ಬಿಐಎಫ್‌ಆರ್) /537 ದಿ:22.8.06.
8. ಸರ್ಕಾರದ ಆದೇಶ ಸಂಖ್ಯೆ:ಸಿಐ 34 ಎಸ್‌ಜಿಎಫ್ 05 ದಿ:23.9.06.

**ಪ್ರಸ್ತಾವನೆ:**

ಮೇಲೆ ಓದಲಾದ 8ರಲ್ಲಿರುವ ಆದೇಶದಲ್ಲಿ ಮೈಸೂರು ಸಕ್ಕರೆ ಕಾರ್ಖಾನೆ (ನಿ) ಮಂಡ್ಯ, ಈ ಕಾರ್ಖಾನೆಗೆ 2006-07 ಸಾಲಿಗೆ ತನ್ನ ಕಬ್ಬು ಅರೆಯುವ ಚಟುವಟಿಕೆಗಾಗಿ 2ನೇ ಕಂತು 5.00 ಕೋಟಿ ರೂಗಳನ್ನು ದುಡಿಯುವ ಬಂಡವಾಳವನ್ನು ಸಾಧಿಲ್ವಾರು ನಿಧಿ ಲೆಕ್ಕ ಶೀರ್ಷಿಕೆ 8000-00-673-0-00 ಕೈಗಾರಿಕೆಗಳು ಇದರಡಿ ಲೆಕ್ಕ ಶಿರ್ಷಿಕೆ 6860-04-190-2-01-395 (ಪಿ) ಸಾರ್ವಜನಿಕ ಉದ್ದಿಮೆಗಳಿಗೆ ಮತ್ತು ಸ್ಥಳೀಯ ಸಂಸ್ಥೆಗಳಿಗೆ ಸಾಲಗಳು ಇದರಿಂದ ಬಿಡುಗಡೆಗೆ ಮಂಜೂರು ಮಾಡಲಾಗಿತ್ತು. ಆದರೆ ಈ ಮೊತ್ತವನ್ನು ಬಿಡುಗಡೆ ಮಾಡಲಾಗಿರುವುದಿಲ್ಲ.

ಈಗ ಮೈಸೂರು ಸಕ್ಕರೆ ಕಾರ್ಖಾನೆಗೆ ಸದರಿ ಮೊತ್ತವನ್ನು 2006-07ನೇ ಸಾಲಿನ ಪೂರಕ ಅಂದಾಜುಗಳು(ಮೊದಲನೆಯ ಕಂತು) ಅಡಿಯಲ್ಲಿ ಲೆಕ್ಕ ಶೀರ್ಷಿಕೆ 6860-04-190-2-01-395 ಸಾರ್ವಜನಿಕ ಉದ್ದಿಮೆಗಳಿಗೆ ಮತ್ತು ಸ್ಥಳೀಯ ಸಂಸ್ಥೆಗಳಿಗೆ ಸಾಲಗಳು (ಯೋಜನೆ)ರಡಿಯಲ್ಲಿ ಒದಗಿಸಲಾಗಿದ್ದು, ಕಾರ್ಖಾನೆಗೆ ದುಡಿಯುವ ಬಂಡವಾಳದ 2ನೇ ಕಂತು 5.00 ಕೋಟಿ ರೂಗಳನ್ನು (ಐದು ಕೋಟಿ ರೂಪಾಯಿಗಳು ಮಾತ್ರ) ಬಿಡುಗಡೆಗೊಳಿಸಲು ಈ ಕೆಳಕಂಡಂತೆ ಮಾರ್ಪಾಡಿತ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಐ 34 ಎಸ್ ಜಿ ಎಫ್ 2005, ದಿನಾಂಕ:10ನೇ ಅಕ್ಟೋಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಮೈಸೂರು ಸಕ್ಕರೆ ಕಾರ್ಖಾನೆ (ನಿ), ಮಂಡ್ಯ ಈ ಕಾರ್ಖಾನೆಗೆ 2006-07ನೇ ಸಾಲಿನ ಕಬ್ಬು ಅರೆಯುವ ಕಾರ್ಯಕ್ರಮಗಳನ್ನು ಮುಂದುವರಿಸುವ ಸಲುವಾಗಿ ದುಡಿಯುವ ಬಂಡವಾಳವಾಗಿ ಎರಡನೇ ಕಂತು 5.00 ಕೋಟಿ ರೂಗಳನ್ನು (ರೂ. ಐದು ಕೋಟಿ ರೂ.ಗಳು ಮಾತ್ರ) ಸಲುವಾಗಿ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಈ ಹಣವನ್ನು 2006-07 ನೇ ಸಾಲಿನಲ್ಲಿ ಪೂರಕ ಅಂದಾಜುಗಳು (ಮೊದಲನೆ ಕಂತು) ಇದರಡಿಯಲ್ಲಿ ಒದಗಿಸಲಾಗಿದ್ದು, ಈ ಹಣವನ್ನು ಲೆಕ್ಕ ಶೀರ್ಷಿಕೆ 6860-04-190-2-01-395 ಸಾರ್ವಜನಿಕ ಉದ್ದಿಮೆಗಳಿಗೆ ಮತ್ತು ಸ್ಥಳೀಯ ಸಂಸ್ಥೆಗಳಿಗೆ ಸಾಲಗಳು(ಯೋಜನೆ) ಯಡಿಯಲ್ಲಿ ಬಿಡುಗಡೆಗೆ ಮಂಜೂರು ಮಾಡಲಾಗಿದೆ.

ಹಣ ಸೆಳೆಯುವ ಅಧಿಕಾರಿಯು ಸಹಾಯಕ ನಿರ್ದೇಶಕರು (ಹೆಚ್.ಆರ್.ಡಿ. ಆಡಳಿತ ಮತ್ತು ಇಎಂ) ಜಿಲ್ಲಾ ಕೈಗಾರಿಕಾ ಕೇಂದ್ರ ಮಂಡ್ಯ ಆಗಿದ್ದು ಸದರಿಯವರು ಹಣ ಸೆಳೆಯುವ ಬಿಲ್ಲನ್ನು ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು ಇವರ ಮೇಲು ಸಹಿಯೊಂದಿಗೆ ಖಜಾನೆಗೆ ಸಲ್ಲಿಸಬೇಕು.

ಸದರಿ ಸಾಲದ ಹಣದ ಮರುಪಾವತಿ ಹಾಗೂ ಇನ್ನಿತರೇ ಅಂಶಗಳು, ಷರತ್ತು ಹಾಗೂ ನಿಬಂಧನೆಗಳ ಬಗ್ಗೆ ಪ್ರತ್ಯೇಕ ಆದೇಶವನ್ನು ನಂತರ ಹೊರಡಿಸಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಎಫ್‌ಡಿ 1736 ವೆಚ್ಚ-1/06 ದಿನಾಂಕ: 10.10.2006ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

..................

ಪಿ.ಆರ್. 1519

ಪೀಠಾಧಿಕಾರಿ (ಸಕ್ಕರೆ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** ಭೀಮರಾಯನಗುಡಿ ಕೃಷಿ ಮಹಾವಿದ್ಯಾಲಯದ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಎಹೆಚ್‌ಡಿ/39/ಎಯುಎಂ/1999, ದಿನಾಂಕ:1.10.99.
2. ಕುಲಸಚಿವರು, ಕೃಷಿ ವಿಶ್ವವಿದ್ಯಾಲಯ, ಧಾರವಾಡ ಇವರ ಪತ್ರ ಸಂಖ್ಯೆ: ಕುಸ/ನೇವಿ/ಜಿ-28/2001, ದಿನಾಂಕ: 12.9.2001.
3. ಕುಲಸಚಿವರು, ಕೃಷಿ ವಿಶ್ವವಿದ್ಯಾಲಯ, ಧಾರವಾಡ ಇವರ ಪತ್ರ ಸಂಖ್ಯೆ:ಕುಸ/ನೇವಿ/ಜಿ-28/2002, ದಿನಾಂಕ: 10.7.2004.
4. ಕುಲಸಚಿವರು, ಕೃಷಿ ವಿಶ್ವವಿದ್ಯಾಲಯ, ಧಾರವಾಡ ಇವರ ಪತ್ರ ಸಂಖ್ಯೆ:ಕುಸ/ನೇಮಕಾತಿ/ಬಿ-93/3374ಎ/2003, ದಿನಾಂಕ:13.9.2005.

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ದಿನಾಂಕ:1.10.1999 ರ ಸರ್ಕಾರಿ ಆದೇಶದಲ್ಲಿ ಧಾರವಾಡ ಕೃಷಿ ವಿಶ್ವವಿದ್ಯಾಲಯದ ಅಧೀನದಲ್ಲಿ ಭೀಮರಾಯನಗುಡಿಯಲ್ಲಿ ಕೃಷಿ ಮಹಾವಿದ್ಯಾಲಯ ಸ್ಥಾಪಿಸಲು ಸರ್ಕಾರದ ಅನುಮೋದನೆ ನೀಡಿದ್ದು, ಸದರಿ ಆದೇಶದಂತೆ ಧಾರವಾಡ ಕೃಷಿ ವಿಶ್ವವಿದ್ಯಾಲಯದ ಅಧೀನದಲ್ಲಿ ಕೃಷಿ ಮಹಾ ವಿದ್ಯಾಲಯವನ್ನು ಭೀಮರಾಯನಗುಡಿಯಲ್ಲಿ ಶೈಕ್ಷಣಿಕ ವರ್ಷ 2001-02 ರಿಂದ ಸರ್ಕಾರದಿಂದ ಹೊರಡಿಸಿರುವ ಆದೇಶದ ಮೇರೆಗೆ ಪ್ರಾರಂಭಿಸಲಾಗಿರುತ್ತದೆಯೆಂದು ಕುಲಸಚಿವರು, ಕೃಷಿ ವಿಶ್ವವಿದ್ಯಾಲಯ, ಧಾರವಾಡ ಇವರು ದಿನಾಂಕ:12.9.2001ರ ತಮ್ಮ ಪತ್ರದಲ್ಲಿ ತಿಳಿಸಿರುತ್ತಾರೆ. ಈ ಮಹಾ ವಿದ್ಯಾಲಯದ ನಿರ್ವಹಣೆಗಾಗಿ ಅಗತ್ಯವಾದ ಒಟ್ಟು 72 ಬೋಧಕ ಮತ್ತು 187 ಬೋಧಕೇತರ ಸಿಬ್ಬಂದಿಯ ಅವಶ್ಯಕತೆಯನ್ನು ಅತಿ ಜರೂರಾಗಿ ಪೂರೈಸುವಂತೆ ಹಾಗೂ ಸದರಿ ಹುದ್ದೆಗಳನ್ನು ತುಂಬಲು ಸರ್ಕಾರದ ಮಂಜೂರಾತಿಯನ್ನು ನೀಡುವಂತೆಯೂ ಸಹ ಕೋರಿರುತ್ತಾರೆ.

ಹಾಗೂ ಕೃಷಿ ಮಹಾ ವಿದ್ಯಾಲಯ, ಭೀಮರಾಯನಗುಡಿಯಲ್ಲಿನ ಹುದ್ದೆಗಳ ಭರ್ತಿಗಾಗಿ ತಗಲುವ ವೆಚ್ಚವನ್ನು ಸದರಿ ಮಹಾವಿದ್ಯಾಲಯಕ್ಕೆ ಮಂಜೂರಾದ ಅನುದಾನದಡಿ ಭರಿಸಲಾಗುವುದೆಂದು ಮೇಲೆ ಕ್ರಮಾಂಕ (3) ರಲ್ಲಿ ಓದಲಾದ ದಿನಾಂಕ:10.7.2004ರ ಪತ್ರದಲ್ಲಿ ಕುಲಸಚಿವರು, ಕೃಷಿ ವಿಶ್ವವಿದ್ಯಾಲಯ, ಧಾರವಾಡ ಇವರು ತಿಳಿಸಿರುತ್ತಾರೆ.

ಮುಂದುವರೆದು ಕುಲಸಚಿವರು, ಕೃಷಿ ವಿಶ್ವವಿದ್ಯಾಲಯ, ಧಾರವಾಡ ಇವರು, ಮೇಲೆ ಕ್ರಮಾಂಕ (4)ರಲ್ಲಿ ಓದಲಾದ ದಿನಾಂಕ:13.9.2005ರ ಪತ್ರದಲ್ಲಿ ಧಾರವಾಡ ಕೃಷಿ ವಿಶ್ವವಿದ್ಯಾಲಯದಲ್ಲಿ ಕೃಷಿ ಜೈವಿಕ ತಂತ್ರಜ್ಞಾನ ಸಂಸ್ಥೆಯು ಕರ್ನಾಟಕ ಸರ್ಕಾರದ ಅನುದಾನದೊಂದಿಗೆ ಸ್ಥಾಪನೆಯಾಗಿದ್ದು, ಕೃಷಿ ಜೈವಿಕ ತಂತ್ರಜ್ಞಾನ ಶಿಕ್ಷಣದ ವಿಷಯಗಳಲ್ಲಿ ಸ್ನಾತಕೋತ್ತರ ಹಾಗೂ ಪಿ.ಹೆಚ್.ಡಿ.ಪದವಿಗಳನ್ನು ನಡೆಸಲು ಸಿಬ್ಬಂದಿಯ ಅವಶ್ಯವಿರುವುದರಿಂದ ಕೃಷಿ ಮಹವಿದ್ಯಾಲಯದ ಹಳೆಯ ಹುದ್ದೆಗಳನ್ನು ರದ್ದುಪಡಿಸಿ ಸದರಿ ಸಂಸ್ಥೆಗೆ ಹೊಸ ಹುದ್ದೆಗಳನ್ನು ಸೃಷ್ಟಿಸಲು ಕೃಷಿ ವಿಶ್ವವಿದ್ಯಾಲಯದ ಆಡಳಿತ ಮಂಡಳಿ ಸಭೆಯಲ್ಲಿ ತೀರ್ಮಾನಿಸಿರುವುದಾಗಿ ತಿಳಿಸುತ್ತಾ, ಕೃಷಿ ಜೈವಿಕ ತಂತಜ್ಞಾನದಲ್ಲಿ ಶಿಕ್ಷಣದ ಮಹತ್ವವನ್ನು ಪರಿಗಣಿಸಿ ಹೊಸದಾಗಿ ಸೃಷ್ಟಿಸಿರುವ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ಆದಷ್ಟು ಬೇಗನೆ ಸರ್ಕಾರದ ಅನುಮತಿ ನೀಡುವಂತೆ ಕೋರಿರುತ್ತಾರೆ.

ಕುಲಸಚಿವರು, ಕೃಷಿ ವಿಶ್ವವಿದ್ಯಾಲಯ, ಧಾರವಾಡ ಇವರ ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಕುಲಸಚಿವರ ಪತ್ರ ಸಂಖ್ಯೆ:ಕುಸ/ನೇವಿ/ಬಿ-93/2003, ದಿನಾಂಕ:17.6.2006ರ ಪತ್ರದನ್ವಯ ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಕೃತೋಇ 155 ಕೃವಿವಿ 2003, ಬೆಂಗಳೂರು, ದಿನಾಂಕ:10ನೇ ಅಕ್ಟೋಬರ್ 2006.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನಲೆಯಲ್ಲಿ ಕೃಷಿ ವಿಶ್ವವಿದ್ಯಾಲಯ, ಧಾರವಾಡದಲ್ಲಿ ಈ ಕೆಳಕಂಡ 5 ಹುದ್ದೆಗಳ ಬದಲಿಗೆ ಅದೇ ಶ್ರೇಣಿಯ ಈ ಕೆಳಕಂಡ ಹುದ್ದೆಗಳನ್ನು ಸೃಜಿಸಲು ಸರ್ಕಾರವು ಆದೇಶಿಸಿದೆ.

**ರದ್ದುಪಡಿಸಬೇಕಾದ ಹುದ್ದೆಗಳು**

1. ಸಹ ಪ್ರಾಧ್ಯಾಪಕರು (ಸೋಶಿಯಾಲಜಿ) - 1 ಹುದ್ದೆ
2. ಸಹಾಯಕ ಪ್ರಧ್ಯಾಪಕರು (ಇಂಗ್ಲೀಷ್) - 1 ಹುದ್ದೆ
3. ಸಹಾಯಕ ಪ್ರಧ್ಯಾಪಕರು (ಪ್ರಾಣಿ ಶಾಸ್ತ್ರ) - 1 ಹುದ್ದೆ
4. ಸಹಾಯಕ ಪ್ರಾಧ್ಯಾಪಕರು (ಸೋಶಿಯಾಲಜಿ) - 1 ಹುದ್ದೆ

5. ಸಹಾಯಕ ಪ್ರಧ್ಯಾಪಕರು (ರಸಾಯನ ಶಾಸ್ತ್ರ) - 1 ಹುದ್ದೆ

**ಹೊಸದಾಗಿ ಸೃಜಿಸಲು ಸಹಮತಿಸಿರುವ ಹುದ್ದೆಗಳು**

1. ಸಹ ಪ್ರಾಧ್ಯಾಪಕರು (ಬಯೋ ಟೆಕ್ನಾಲಜಿ) - 1. ಹುದ್ದೆ
2. ಸಹಾಯಕ ಪ್ರಾಧ್ಯಾಪಕರು (ಬಯೋ ಕೆಮಿಸ್ಟ್ರಿ) - 1. ಹುದ್ದೆ
3. ಸಹಾಯಕ ಪ್ರಾಧ್ಯಾಪಕರು (ಅಗ್ರಿ ಬಯೋಟೆಕ್ನಾಲಜಿ) - 3. ಹುದ್ದೆಗಳು

ಮಂಜೂರಾದ ಹುದ್ದೆಗಳನ್ನು ಭರ್ತಿ ಮಾಡುವ ವಿಷಯದಲ್ಲಿ ಕೃಷಿ ವಿಶ್ವವಿದ್ಯಾಲಯ, ಧಾರವಾಡ ನಿಯಮಾನುಸಾರ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 473 ವೆಚ್ಚ-4/06, ದಿನಾಂಕ: 12.9.2006 ರ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ. ಗುರಾಣಿ**

ಪಿ.ಆರ್. 1522

ಸರ್ಕಾರದ ಅಧೀನ ಕಾರ್ಯದರ್ಶಿ

ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ಸವಿತಾ ಸಮಾಜ, ಬೆಂಗಳೂರು ಈ ಸಂಸ್ಥೆಗೆ ಆಡಳಿತಾಧಿಕಾರಿ ನೇಮಕ ಕುರಿತು.

**ಓದಲಾಗಿದೆ:**
1. ಜಿಲ್ಲಾ ನೋಂದಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಇವರ ಪತ್ರ ಸಂಖ್ಯೆ:576/46-47, ದಿನಾಂಕ:11.5.2006.
2. ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ: ಕಂಇ 8 ಮುನೊಸೊ 2006, ದಿನಾಂಕ:7.8.2006.
3. ಅಧ್ಯಕ್ಷರು/ಪ್ರಧಾನ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಸವಿತಾ ಸಮಾಜ, ಬೆಂಗಳೂರು ಇವರ ಲಿಖಿತ ಹೇಳಿಕೆ, ದಿನಾಂಕ:18.8.2006.
4. ಸರ್ಕಾರದ ಪತ್ರ ಸಂಖ್ಯೆ:ಕಂಇ 8 ಮುನೊಸೊ 06, ದಿನಾಂಕ:1.9.2006.

**ಪ್ರಸ್ತಾವನೆ:**

ಮೇಲೆ ಓದಲಾದ ಜಿಲ್ಲಾ ನೋಂದಣಾಧಿಕಾರಿಗಳ ಪತ್ರದಲ್ಲಿ ಕರ್ನಾಟಕ ರಾಜ್ಯ ಸವಿತಾ ಸಮಾಜ, ಬೆಂಗಳೂರು ಈ ಸಂಸ್ಥೆಯು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರನ್ವಯ ನೋಂದಾಯಿಸಲಾಗಿದ್ದು, ಸಂಸ್ಥೆಯ ನೋಂದಣಿ ಸಂಖ್ಯೆ:576/46-47 ಆಗಿರುತ್ತದೆ. ಸಂಸ್ಥೆಯ ಕುರಿತು ಅನೇಕ ದೂರುಗಳು ಸ್ವೀಕೃತ ಹಿನ್ನಲೆಯಲ್ಲಿ ಸಂಘವನ್ನು ಕುರಿತು ಸ್ವಇಚ್ಛೆ ವಿಚಾರಣೆ ನಡೆಸಿ ವರದಿ ನೀಡುತ್ತಾ, ಸಂಘವು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 13ರ ಪ್ರಕಾರ 2002ನೇ ಸಾಲಿನವರೆಗೆ ಲೆಕ್ಕಪತ್ರ ದಾಖಲಿಸಿದೆ. ನಂತರ ಪ್ರತಿ ವರ್ಷ ಸರ್ವ ಸದಸ್ಯರ ಸಭೆ ಕರೆದಿರುವುದರ ಬಗ್ಗೆ ಮಾಹಿತಿ ನೀಡಿರುವುದಿಲ್ಲ ಹಾಲೀ ಕಾರ್ಯಕಾರಿ ಸಮಿತಿಯ ಅವಧಿಪೂರ್ಣಗೊಂಡಿದ್ದರೂ ಚುನಾವಣೆ ನಡೆಸುವ ಬಗ್ಗೆ ತೀರ್ಮಾನ ತೆಗೆದುಕೊಂಡಿರುವುದಿಲ್ಲ ಆದ್ದರಿಂದ ಕರ್ನಾಟಕ ಸವಿತಾ ಸಮಾಜ ಈ ಸಂಸ್ಥೆಗೆ ಚುನಾವಣೆ ನಡೆಸಲು ಆಡಳಿತಾಧಿಕಾರಿ ನೇಮಕ ಮಾಡಲು ಜಿಲ್ಲಾ ನೋಂದಣಾಧಿಕಾರಿಗಳು ಶಿಫಾರಸ್ಸು ಮಾಡಿರುತ್ತಾರೆ. ಓದಲಾದ (2)ರಲ್ಲಿ ಜಿಲ್ಲಾ ನೋಂದಾಣಾಧಿಕಾರಿಗಳ ವರದಿಯನ್ನು ಪರಿಶೀಲಿಸಿ ಸಂಸ್ಥೆಗೆ ಏಕೆ ಆಡಳಿತಾಧಿಕಾರಿ ನೇಮಕ ಮಾಡಬಾರದೆಂಬ ಬಗ್ಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಯಿತು. ಓದಲಾದ (3)ರಲ್ಲಿ ಸಂಸ್ಥೆಯ ಮನವಿ ಸಲ್ಲಿಸಿ ಸರ್ಕಾರದ ಕಾರಣ ಕೇಳುವ ನೋಟೀಸಿಗೆ ವಿವರವಾದ ಲಿಖಿತ ಹೇಳಿಕೆ ಸಲ್ಲಿಸಲು ಒಂದು ತಿಂಗಳ ಕಾಲಾವಕಾಶ ಕೋರಿದ್ದನ್ನು ಪರಿಶೀಲಿಸಿ ಓದಲಾದ (4)ರ ಪತ್ರದ ಪ್ರಕಾರ ಸಮಸ್ಥೆಗೆ ಹೇಳಿಕೆ ನೀಡಲು 8 ದಿನಗಳ ಕಾಲಾವಕಾಶ ನೀಡಿದೆ ಸಂಸ್ಥೆಗೆ ನೀಡಿದ ಹೆಚ್ಚಿನ ಕಾಲಾವಧಿಯು ಮುಕ್ತಾಯಗೊಂಡಿದಾಗ್ಯೂ ಕಾರಣ ಕೇಳುವ ನೋಟೀಸಿಗೆ ಲಿಖಿತ ಹೇಳಿಕೆಯನ್ನು ನಿಗದಿತ ಅವಧಿಯಲ್ಲಿ ಸಲ್ಲಿಸಿರುವುದಿಲ್ಲ ಜಿಲ್ಲಾ ನೋಂದಣಾಧಿಕಾರಿಗಳ ವರದಿಯ ಪ್ರಕಾರ ಸಂಘವು ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 11, 12 ಹಾಗೂ 13ಗಳನ್ನು ಉಲ್ಲಂಘನೆ ಮಾಡಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ ಸಂಸ್ಥೆಯ ಹಿತದೃಷ್ಟಿಯಿಂದ ಸಂಘಕ್ಕೆ ಆಡಳಿತಾಧಿಕಾರಿ ನೇಮಕ ಮಾಡಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ 8 ಮುನೊಸೊ 2006, ಬೆಂಗಳೂರು, ದಿನಾಂಕ: 26ನೇ ಸೆಪ್ಟೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ರಾಜ್ಯ ಸವಿತಾ ಸಮಾಜ, ನಂ. 21, ಸವಿತಾ ಭವನ, ಜರ್ನಲಿಸ್ಟ್ ಕಾಲೋನಿ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಈ ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27 ಎ ಪ್ರಕಾರ ಸರ್ಕಾರಕ್ಕೆ ನಿಹಿತವಾಗಿರುವ ಅಧಿಕಾರವನ್ನು ಚಲಾಯಿಸಿ ಸಂಘದ ಹಿತದೃಷ್ಟಿಯಿಂದ ಉಪ ವಿಭಾಗಾಧಿಕಾರಿ, ಬೆಂಗಳುರು ಉತ್ತರ ಉಪ ವಿಭಾಗ, ಬೆಂಗಳೂರು ಇವರನ್ನು ಆಡಳಿತಾಧಿಕಾರಿಯಾಗಿ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದೊ ಮೊದಲೊ ಅಲ್ಲಿಯವರೆಗೆ ನೇಮಿಸಿದೆ.

ಆಡಳಿತಾಧಿಕಾರಿಗಳು ಈ ಅವಧಿಯಲ್ಲಿ ಜರೂರಾಗಿ ಸರ್ವ ಸದಸ್ಯರ ಸಭೆ ಕರೆದು, ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಿವಲಿಂಗ**

ಪಿ.ಆರ್. 1524

ಪೀಠಾಧಿಕಾರಿ, ಕಂದಾಯ ಇಲಾಖೆ.

(ನೋಂದಣಿ ಮತ್ತು ಮುದ್ರಾಂಕ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಕ್ರೋಢೀಕರಣ ಶಾಖೆಯ ಹುದ್ದೆಗಳನ್ನು ಖಾಯಂಗೊಳಿಸುವ ಬಗ್ಗೆ.

**ಓದಲಾಗಿದೆ** ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಂವ್ಯಶಾಇ 19 ಆಡಳಿತ 2006 ದಿನಾಂಕ:9.5.2006.

**ಪ್ರಸ್ತಾವನೆ:**

ಮೇಲೆ ಓದಲಾದ ಟಿಪ್ಪಣಿಯಲ್ಲಿ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯು ಸದರಿ ಇಲಾಖೆಯ ಕ್ರೋಢೀಕರಣ ಶಾಖೆಗೆ ಸೃಜಿಸಿ ಮತ್ತು ಕಾಲಕಾಲಕ್ಕೆ ಮುಂದುವರಿಸಿಕೊಂಡು ಬಂದಿರುವ ಒಂದು ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ ಹುದ್ದೆ ಹಾಗೂ ಒಂದು ಶೀಘ್ರಲಿಪಿಗಾರರ ಹುದ್ದೆಯನ್ನು ಖಾಯಂಗೊಳಿಸುವ ಅಗತ್ಯತೆ ಬಗ್ಗೆ ಸಮರ್ಥನೆ ನೀಡಿ, ಸದರಿ ಹುದ್ದೆಗಳನ್ನು ಖಾಯಂಗೊಳಿಸುವಂತೆ ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ :ಸಿಆಸುಇ 41 ಸಸಿವಿ 2006, ಬೆಂಗಳೂರು, ದಿನಾಂಕ: 13ನೇ ಅಕ್ಟೋಬರ್ 2006**

ಕರ್ನಾಟಕ ಸರ್ಕಾರ ಸಚಿವಾಲಯದ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಕ್ರೋಢೀಕರಣ ಶಾಖೆಗೆ ಸೃಜಿಸಲಾಗಿರುವ ಈ ಕೆಳಕಂಡ ಹುದ್ದೆಗಳನ್ನು ಖಾಯಂಗೊಳಿಸಲಾಗಿದೆ.

1. ಸಹಾಯಕ ಪ್ರಾರೂಪಕಾರ ಮತ್ತು
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ 1 ಹುದ್ದೆ
2. ಶೀಘ್ರಲಿಪಿಗಾರರು 1 ಹುದ್ದೆ

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ 1638 ವೆಚ್ಚ-5/2006, ದಿನಾಂಕ:26.9.2006ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 1529

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಪ್ರಥಮ ಬಿಎಎಂಎಸ್/ಬಿಯುಎಂಎಸ್/ಬಿಹೆಚ್‌ಎಸ್/ ಬಿಎನ್‌ವೈಎಸ್/ಪ್ರವೇಶಕ್ಕೆ 2006-07ನೇ ಸಾಲಿನ ಶೈಕ್ಷಣಿಕ ವರ್ಷದಲ್ಲಿ ಸಿ.ಇ.ಟಿ. ಸಾಂದರ್ಭಿಕ ಸುತ್ತು ಮುಗಿದ ನಂತರ ವಿದ್ಯಾರ್ಥಿಗಳ ಪರಸ್ಪರ ವರ್ಗಾವಣೆ ಮಾಡಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** 1. ನಿರ್ದೇಶಕರು, ಆಯುಸ್ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ:ಆಯುಸ್:53:ಅಭಿವೃದ್ಧಿ (2) 2006-07 ದಿ:4.9.2006.

2. ಸರ್ಕಾರದ ಆದೇಶ ಸಂಖ್ಯೆ:ಆಕುಕ 374 ಎಂಪಿಎಸ್ 2006, ದಿ:26.3.2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ನಿರ್ದೇಶಕರ ಪತ್ರದಲ್ಲಿ 2006-07ನೇ ಸಾಲಿನಲ್ಲಿ ಸಿ.ಇ.ಟಿ. ಮೂಲಕ ಸರ್ಕಾರಿ ಖಾಸಗಿ ವೈದ್ಯಕೀಯ ದಂತ ಕಾಲೇಜುಗಳಲ್ಲಿ ಎಂ..ಬಿ.ಬಿ.ಎಸ್. ಬಿ.ಡಿ.ಎಸ್. ಕೋರ್ಸ್‌ಗಳಿಗೆ ಪ್ರವೇಶ ಪಡೆದಿರುವ ಅಭ್ಯರ್ಥಿಗಳಿಗೆ ಒಂದು ವೈದ್ಯಕೀಯ ಕಾಲೇಜಿನಿಂದ ಮತ್ತೊಂದು ವೈದ್ಯಕೀಯ ಕಾಲೇಜಿಗೆ ಕೆಲವೊಂದು ಷರತ್ತುಗಳಿಗೊಳಪಟ್ಟು ಪರಸ್ಪರ ವರ್ಗಾಯಿಸಲು ಮೇಲೆ(2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಅನುಮತಿ ನೀಡಿರುವಂತೆ ಆಯುಸ್ ಇಲಾಖೆಯಲ್ಲಿ ಸಿ.ಇ.ಟಿ. ಮುಖಾಂತರ ಪ್ರಥಮ ಬಿಎಎಂಎಸ್/ಬಿವಿಎಂಎಸ್/ಬಿಹೆಚ್ ಎಂಎಸ್/ ಬಿಎನ್ ವೈಎಸ್ ಪದವಿ ಕೋರ್ಸ್‌ಗಳಿಗೆ ಆಯ್ಕೆ ಹೊಂದಿದ ಅಭ್ಯರ್ಥಿಗಳಿಗೂ ಸಹ 2006-07ನೇ ಸಾಲಿಗೆ ವರ್ಗಾವಣೆ/ ಪರಸ್ಪರ ವರ್ಗಾವಣೆ ಮಾಡಲು ಮತ್ತು ಸಿ.ಇ.ಟಿ. ಮೂಲಕ ಭರ್ತಿಯಾಗದೇ ಖಾಲಿ ಉಳಿದಿರುವ ಸೀಟುಗಳನ್ನು ಆಡಳಿತ ಮಂಡಳಿಯಿಂದ ಭರ್ತಿ ಮಾಡಿಕೊಂಡ ಬಗ್ಗೆ ನಿರ್ದೇಶನಾಲಯದಿಂದ ಅನುಮತಿ ನೀಡಲು ಕೆಲವೊಂದು ಷರತ್ತುಗಳೊಂದಿಗೆ ಸರ್ಕಾರದ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಆಕುಕ 298 ಪಿಟಿಡಿ 2006, ದಿ:16ನೇ ಸೆಪ್ಟೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಆಯುಷ್ ಇಲಾಖೆಯಲ್ಲಿ ಸಿ.ಇ.ಟಿ. ಮುಖಾಂತರ ಪ್ರಥಮ ಬಿಎಎಂಎಸ್/ ಬಿಯುಎಂಎಸ್/ ಬಿಹೆಚ್‌ಎಸ್/ಬಿಎನ್‌ವೈಎಸ್/ಪದವಿ ಕೋರ್ಸ್‌ಗಳಿಗೆ ಆಯ್ಕೆ ಹೊಂದಿದ ಅಭ್ಯರ್ಥಿಗಳಿಗೆ 2006-07ನೇ ಸಾಲಿನಲ್ಲಿ ವರ್ಗಾವಣೆ/ ಪರಸ್ಪರ ವರ್ಗಾವಣೆ ಮಾಡಲು ಮತ್ತು ಸಿ.ಇ.ಟಿ. ಮೂಲಕ ಭರ್ತಿಯಾಗದೇ ಖಾಲಿ ಉಳಿದಿರುವ ಸೀಟುಗಳನ್ನು ಆಡಳಿತ ಮಂಡಳಿಯಿಂದ ಭರ್ತಿ ಮಾಡಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಅನುಮತಿ ನೀಡಲಾಗಿದೆ.

**ಷರತ್ತುಗಳು**

1. ಅಭ್ಯರ್ಥಿಯು, ಸೀಇಟಿಯಿಂದ ಆಯ್ಕೆಯಾದ ಕಾಲೇಜಿನಿಂದ ಅನಾಕ್ಷೇಪಣಾ ಪ್ರಮಾಣಪತ್ರ ಸಲ್ಲಿಸುವುದು.
2. ಅಭ್ಯರ್ಥಿಯು ವರ್ಗಾವಣೆ/ಪರಸ್ಪರ ವರ್ಗಾವಣೆ ಹೊಂದಲು ಇಚ್ಛಿಸುವ ಕಾಲೇಜಿನಿಂದ ಪ್ರವೇಶ ಸಾಮರ್ಥ್ಯ ಮಿತಿಗೆ ಒಳಪಟ್ಟು ಅನಾಕ್ಷೇಪಣಾ ಪ್ರಮಾಣ ಪತ್ರ ಸಲ್ಲಿಸುವುದು.
3. ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯದ ಅನುಮೋದನೆ ನಿಯಮಾವಳಿಗೊಳಪಟ್ಟಿರಬೇಕು.
4. ಆಡಳಿತ ಮಂಡಳಿಯಿಂದ ಸಿಒಟಿ ಮೂಲಕ ಭರ್ತಿಯಾಗದೇ ಖಾಲಿ ಉಳಿದಿರುವ ಸೀಟುಗಳನ್ನು ಭರ್ತಿಮಾಡಿಕೊಳ್ಳಲು ನಿರ್ದೇಶನಾಲಯದಿಂದ ಅನುಮತಿ ನೀಡುವುದು.
5. ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾನಿಲಯದ ಕ್ಯಾಲೆಂಡರ್ ಆಫ್ ಇವೆಚಿಟ್ಸ್ ಅಧಿಸೂಚನೆಗೊಳಪಟ್ಟಿರಬೇಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಪಿ.ಆರ್. 1436

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾ.ವೈ.ಪ)

## ಸಾರಿಗೆ ಸಚಿವಾಲಯ

**ವಿಷಯ:** ಪುತ್ತೂರು ಪ್ರಾದೇಶಿಕ ಸಾರಿಗೆ ಕಚೇರಿ ಕಟ್ಟಡದ ನಿರ್ಮಾಣದ ಕಾಮಗಾರಿಯ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ.

**ಉಲ್ಲೇಖ:** ಸಾರಿಗೆ ಆಯುಕ್ತರ ಪತ್ರ ಸಂಖ್ಯೆ:ಸಾಆ/ಪೀಕಾ-3/ಪಿಆರ್-383/85-86, ದಿನಾಂಕ:11.9.06

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಪುತ್ತೂರು ಪ್ರಾದೇಶಿಕ ಸಾರಿಗೆ ಕಛೇರಿಯು 1.02 ಎಕರೆ ಸ್ವಂತ ನಿವೇಶನವನ್ನು ಹೊಂದಿದ್ದು, ಸದರಿ ಜಾಗದಲ್ಲಿ ಕಛೇರಿ ಕಟ್ಟಡ ನಿರ್ಮಾಣ ಮಾಡಲು ಮುಖ್ಯ ಇಂಜಿನಿಯರ್ ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇದರಿಂದ ಅಂದಾಜು ಪಟ್ಟಿ ಮತ್ತು ನೀಲಿ ನಕ್ಷೆಯನ್ನು ಪಡೆದು ಸಲ್ಲಿಸಲಾಗಿದೆ. ಕಛೇರಿ ಅಂದಾಜು ಪಟ್ಟಿ ಮತ್ತು ನೀಲಿ ನಕ್ಷೆಯಂತೆ ರೂ. 199.00 ಲಕ್ಷಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಸಾರಿಗೆ ಆಯುಕ್ತರು ಕೋರಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ :ಸಾರಿಇ 277 ಸಾಇಪ 06, ದಿನಾಂಕ:20ನೇ ಸೆಪ್ಟೆಂಬರ್ 2006**

**(ಯುನಿಕ್ ಕ್ರಮಸಂಖ್ಯೆ: ಸಾರಿಇ 84/06, ದಿನಾಂಕ:20ನೇ ಸೆಪ್ಟೆಂಬರ್ 2006)**

ಪುತ್ತೂರು ಪ್ರಾದೇಶಿಕ ಸಾರಿಗೆ ಕಛೇರಿಯ ಕಟ್ಟಡ ನಿರ್ಮಾಣ ಮಾಡಲು ಮುಖ್ಯ ಇಂಜಿನೀಯರ್ ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಸಲ್ಲಿಸಿರುವ ಅಂದಾಜು ಪಟ್ಟಿಯಂತೆ ರೂ. 199.00 ಲಕ್ಷಗಳಿಗೆ (ಒಂದು ನೂರಾ ತೊಂಬತ್ತೊಂಬತ್ತು ಲಕ್ಷಗಳು ಮಾತ್ರ) ಸರ್ಕಾರದ ಆಡಳಿತಾತ್ಮಕ ಮಂಜೂರಾತಿ ನೀಡಿದೆ.

ಸದರಿ ಕಾಮಗಾರಿಗೆ 2006-07 ನೇ ಸಾಲಿನಲ್ಲಿ ಲೋಕೋಪಯೋಗಿ ಇಲಾಖೆಯು ಲೆಕ್ಕ ಶೀರ್ಷಿಕೆ 4,59-80-050-0-34 ರ ಅಪೆಂಡಿಕ್ಸ್ -ಇ ನಲ್ಲಿ ಒದಗಿಸಲಾದ ರೂ. 50.00 ಲಕ್ಷಗಳ ವೆಚ್ಚವನ್ನು ಭರಿಸುವ ನಿಬಂಧನೆಗೆ ಒಳಪಟ್ಟು ಈ ಕಾಮಗಾರಿಯನ್ನು ಪ್ರಾರಂಭಿಸುವಂತೆ ಆದೇಶಿಸಲಾಗಿದೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ:ಎಫ್ ಡಿ 1 ಟಿಎಫ್‌ಪಿ 2001, ದಿನಾಂಕ:20.1.2003ರಲ್ಲಿ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಲಾದ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ರಾಮಪ್ಪ**

ಪಿ.ಆರ್. 1437

ಸರ್ಕಾರದ ಅಧೀನ ಕಾರ್ಯದರ್ಶಿ,

ಸಾರಿಗೆ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಮೆ. ಗೋಕಾಕ್ ಶುಗರ್ಸ್ (ಲಿ), ರವರ ಬೆಳಗಾಂ ಜಿಲ್ಲೆ, ಗೋಕಾಕ್ ತಾಲ್ಲೂಕು, ಕೊಳವಿ ಗ್ರಾಮದಲ್ಲಿ ಸ್ಥಾಪಿಸಲಿರುವ 14 ಮೆ. ವ್ಯಾಟ್ ಸಹ ವಿದ್ಯುತ್ ಘಟಕವನ್ನೊಳಗೊಂಡ 2500 ಟಿಸಿಡಿ ಸಾಮರ್ಥ್ಯದ ಸಕ್ಕರೆ ಕಾರ್ಖಾನೆ ಸ್ಥಾಪನೆಗೆ ಸರ್ಕಾರದ ತಾತ್ವಿಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸಿಐ 260 ಎಸ್‌ಜಿಎಸ್ 04 ದಿ:16.3.2005.
2. ಆಯುಕ್ತರು ಕಬ್ಬು ಅಭಿವೃದ್ಧಿರವರ ಪತ್ರ ಸಂಖ್ಯೆ:ಡಿಎಸ್‌ಕೆ/ ಡಿಇವಿ/91 2005-06 ದಿನಾಂಕ:23.6.2006.

**ಪ್ರಸ್ತಾವನೆ:**

ಮೇಲೆ ಓದಲಾದ (2)ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರದಲ್ಲಿ ಮೆ. ಗೋಕಾಕ್ ಶುಗರ್ಸ್ (ಲಿ), ರವರು ಬೆಳಗಾಂ ಜಿಲ್ಲೆ, ಗೋಕಾಕ್ ತಾಲ್ಲೂಕು, ಕೊಳವಿ ಗ್ರಾಮದಲ್ಲಿ 14 ಮೆ.ವ್ಯಾಟ್ ಸಹ ವಿದ್ಯುತ್ ಘಟಕವನ್ನೊಳಗೊಂಡ 2500 ಟಿಸಿಡಿ ಸಾಮರ್ಥ್ಯದ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಉದ್ದೇಶಿಸಿದ್ದಾರೆಂದು ತಿಳಿಸಿ ಈ ಕಾರ್ಖಾನೆ ಸ್ಥಾಪನೆಗೆ ಸರ್ಕಾರದ ತಾತ್ವಿಕ ಅನುಮೋದನೆಯನ್ನು ನೀಡಲು ಶಿಫಾರಸ್ಸು ಮಾಡಿದ್ದಾರೆ.

ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 99 ಎಸ್‌ಜಿಎಫ್ 05, ಬೆಂಗಳೂರು, ದಿನಾಂಕ:22ನೇ ಸೆಪ್ಟೆಂಬರ್ 2006.**

ಮೆ. ಗೋಕಾಕ್ ಶುಗರ್ಸ್ (ಲಿ) ರವರು ಬೆಳಗಾಂ ಜಿಲ್ಲೆ, ಗೋಕಾಕ್ ತಾಲ್ಲೂಕು, ಕೊಳವಿ ಗ್ರಾಮದಲ್ಲಿ 14 ಮೆ. ವ್ಯಾಟ್ ಸಹ ವಿದ್ಯುತ್ ಘಟಕವನ್ನೊಳಗೊಂಡ 2500 ಟಿಸಿಡಿ ಸಾಮರ್ಥ್ಯದ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಸರ್ಕಾರದ ಆದೇಶ ಸಂಖ್ಯೆ:ಸಿಐ 260 ಎಸ್‌ಜಿಎಫ್ 04, ದಿನಾಂಕ:16.3.2005ರ ನಿರ್ಬಂಧನೆ (ಅ) ನ್ನು ಸಡಿಲಿಸುವ ಮೂಲಕ ಸರ್ಕಾರದ ತಾತ್ವಿಕ ಅನುಮೋದನೆಯನ್ನು ನೀಡಲಾಗಿದೆ.

ಮುಂದುವರೆದು ಸಹ ವಿದ್ಯುತ್ ಘಟಕ ಸ್ಥಾಪನೆಗೆ ಸಂಬಂಧಪಟ್ಟ ಇಲಾಖೆಯಿಂದ ನಿಯಮಾನುಸಾರ ಅನುಮತಿ ಪಡೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಆನಂದಕುಮಾರ್**

ಪಿ.ಆರ್. 1438

ಪೀಠಾಧಿಕಾರಿ (ಸಕ್ಕರೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ಜಲ ಸಂಪನ್ಮೂಲ ಇಲಾಖೆಯ ಬೃಹತ್ ನೀರಾವರಿ ಯೋಜನೆಗಳ ನಿಯಂತ್ರಣಾ ಮಂಡಳಿ ಹಾಗೂ ನೀರಾವರಿ ಯೋಜನೆಗಳ ತಾಂತ್ರಿಕ ಸಲಹಾ ಸಮಿತಿಗಳ ಸದಸ್ಯರುಗಳಿಗೆ ಉಪಸ್ಥಿತಿ ಭತ್ಯೆಯನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ: 3.2.2001.
2. ಅಧ್ಯಕ್ಷರು, ತಾಂತ್ರಿಕ ಸಲಹಾ ಸಮಿತಿ, ಇವರ ಪತ್ರ ದಿನಾಂಕ:29.9.2004.

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಸರ್ಕಾರಿ ಆದೇಶದಲ್ಲಿ ಸರ್ಕಾರದ ಅಧಿಕಾರದ ಮೇರೆಗೆ ಸರ್ಕಾರದ ಪ್ರಾಧಿಕಾರದಿಂದ ಅಥವಾ ಸರ್ಕಾರದಿಂದ ರಚಿಸಿದ ಸಮಿತಿ, ಆಯೋಗ ಮತ್ತು ಇತರ ಸಮಸ್ಥೆಗಳ ಅಧಿಕಾರೇತರ ಸದಸ್ಯರಿಗೆ (ಬೆಂಗಳೂರು ನಗರದಲ್ಲಿ ನಡೆಯುವ ಸಭೆಗಳಿಗೆ ಕುರಿತಂತೆ) ರೂ. 150.00 ಗಳ ಉಪಸ್ಥಿತಿ ಭತ್ಯೆ ಪಾವತಿಸಲಾಗುತ್ತಿತ್ತು.

2. ಮೇಲೆ ಓದಲಾದ (2)ರ ಪತ್ರದಲ್ಲಿ ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತ, ಕರ್ನಾಟಕ ನೀರಾವರಿ ನಿಗಮ ನಿಯಮಿತ ಮತ್ತು ಕಾವೇರಿ ನೀರಾವರಿ ನಿಗಮ ನಿಯಮಿತದ ತಾಂತ್ರಿಕ ಉಪ ಸಮಿತಿಗಳ ಅಧಿಕಾರೇತರ ಸದಸ್ಯರುಗಳಿಗೆ ನೀಡಲಾಗುತ್ತಿರುವಂತೆಯೇ ನೀರಾವರಿ ಯೋಜನೆಗಳ ತಾಂತ್ರಿಕ ಸಲಹಾ ಸಮಿತಿಯ ಅಧಿಕಾರೇತರ ಸದಸ್ಯರುಗಳಿಗೆ ಉಪಸ್ಥಿತಿ ಭತ್ಯೆಯನ್ನು ಪಾವತಿಸುವಂತೆ ಅಧ್ಯಕ್ಷರು, ತಾಂತ್ರಿಕ ಸಲಹಾ ಸಮಿತಿ, ಬೆಂಗಳೂರು, ಇವರು ಕೋರಿರುತ್ತಾರೆ.

3. ಸದರಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕುಷವಾಗಿ ಪರಿಶೀಲಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಜಸಂಇ 31 ಎನ್ ಪಿಸಿ 2006, ಬೆಂಗಳೂರು, ದಿನಾಂಕ:27ನೇ ಸೆಪ್ಟೆಂಬರ್ 2006**

ಜಲ ಸಂಪನ್ಮೂಲ ಇಲಾಖೆಯ ಬೃಹತ್ ನೀರಾವರಿ ಯೋಜನೆಗಳ ನಿಯಂತ್ರಣಾ ಮಂಡಳಿ ಹಾಗೂ ನೀರಾವರಿ ಯೋಜನೆಗಳ ತಾಂತ್ರಿಕ ಸಲಹಾ ಸಮಿತಿಗಳ ಅಧಿಕಾರೇತರ ಸದಸ್ಯರುಗಳಿಗೆ ಸಮಿತಿಯ ಸಭೆಯಲ್ಲಿ ಭಾಗವಹಿಸಿದ ದಿನವೊಂದಕ್ಕೆ ನೀಡಲಾಗುತ್ತಿದ್ದ ರೂ. 150.00 ಗಳ ಉಪಸ್ಥಿತಿ ಭತ್ಯೆಯನ್ನು ಪರಿಷ್ಕರಿಸಿ ರೂ. 500.00 ಗಳಿಗೆ ನಿಗಧಿಗೊಳಿಸಲಾಗಿದೆ.

2. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಲೋಇ 500 ಆಕೋ-1/ 06, ದಿನಾಂಕ:2.9.2006, ರಲ್ಲಿ ನೀಡಲಾದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ರಂಗರಾಜು**

ಪಿ.ಆರ್. 1439

ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ, ಎಂಎಂಐ-3),
ಜಲ ಸಂಪನ್ಮೂಲ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಕೋರ್‌ಗ್ರೀನ್ ಶೂಗರ್ ಅಂಡ್ ಫ್ಯೂಯಲ್ಸ್ ಪ್ರೈ (ಲಿ), ರವರು ಗುಲ್ಬರ್ಗಾ ಜಿಲ್ಲೆ, ಶಹಾಪುರ ತಾಲ್ಲೂಕು, ತುಮಕೂರು ಗ್ರಾಮದಲ್ಲಿ ಸ್ಥಾಪಿಸಲಿರುವ 24 ಮೆ. ವ್ಯಾಟ್ ಸಹ ವಿದ್ಯುತ್ ಘಟಕ ಹಾಗೂ 15000 ಕಿ.ಲೀ. ಡಿಸ್ಟಲರಿ ಘಟಕವನ್ನೊಳಗೊಂಡ 5000 ಟಿಸಿಡಿ ಸಾಮರ್ಥ್ಯದ ಸಕ್ಕರೆ ಕಾರ್ಖಾನೆ ಸ್ಥಾಪನೆಗೆ ಸರ್ಕಾರದ ತಾತ್ವಿಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸಿಐ 260 ಎಸ್‌ಜಿಎಸ್ 04 ದಿ:16.3.2005.
2. ಆಯುಕ್ತರು ಕಬ್ಬು ಅಭಿವೃದ್ಧಿರವರ ಪತ್ರ ಸಂಖ್ಯೆ:ಡಿಎಸ್‌ಕೆ/ ಡಿಇವಿ/40/ 2004-05 ದಿನಾಂಕ:2.8.2006.

**ಪ್ರಸ್ತಾವನೆ:**

ಮೇಲೆ ಓದಲಾದ (2)ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರದಲ್ಲಿ ಕೋರ್‌ಗ್ರೀನ್ ಶುಗರ್ ಅಂಡ್ ಫ್ಯೂಯಲ್ಸ್ ಪ್ರೈ (ಲಿ), ರವರು ಗುಲ್ಬರ್ಗಾ ಜಿಲ್ಲೆ, ಶಹಾಪುರ ತಾಲ್ಲೂಕು, ತುಮಕೂರು ಗ್ರಾಮದಲ್ಲಿ 24 ಮೆ. ವ್ಯಾಟ್ ಸಹ ವಿದ್ಯುತ್ ಘಟಕ ಹಾಗೂ 15000 ಕಿ.ಲೀ ಸಾಮರ್ಥ್ಯದ ಡಿಸ್ಟಿಲರಿ ಘಟಕವನ್ನೊಳಗೊಂಡ 5000 ಟಿಸಿಡಿ ಸಾಮರ್ಥ್ಯದ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಉದ್ದೇಶಿಸಿದ್ದಾರೆಂದು ತಿಳಿಸಿ ಈ ಕಾರ್ಖಾನೆ ಸ್ಥಾಪನೆಗೆ ಸರ್ಕಾರದ ತಾತ್ವಿಕ ಅನುಮೋದನೆಯನ್ನು ನೀಡಲು ಶಿಫಾರಸ್ಸು ಮಾಡಿದ್ದಾರೆ.

ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರ ಆದೇಶ ಸಂಖ್ಯೆ:ಸಿಐ 249 ಎಸ್‌ಜಿಎಫ್ 05, ಬೆಂಗಳೂರು, ದಿನಾಂಕ:19ನೇ ಸೆಪ್ಟೆಂಬರ್ 2006**

ಕೋರ್ ಗ್ರೀನ್ ಶೂಗರ್ ಅಂಡ್ ಫ್ಯೂಯಲ್ಸ್ ಪ್ರೈ (ಲಿ). ರವರು ಗುಲ್ಬರ್ಗಾ ಜಿಲ್ಲೆ, ಶಹಾಪುರ ತಾಲ್ಲೂಕು, ತುಮಕೂರು ಗ್ರಾಮದಲ್ಲಿ 24 ಮೆ. ವ್ಯಾಟ್ ಸಹ ವಿದ್ಯುತ್ ಘಟಕ ಹಾಗೂ 15000 ಕಿ.ಲೀ ಸಾಮರ್ಥ್ಯದ ಡಿಸ್ಟಿಲರಿ ಘಟಕವನ್ನೊಳಗೊಂಡ 5000 ಟಿಸಿಡಿ ಸಾಮರ್ಥ್ಯದ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಸರ್ಕಾರದ ಆದೇಶ ಸಂಖ್ಯೆ:ಸಿಐ 260 ಎಸ್‌ಜಿಎಫ್ 04, ದಿನಾಂಕ:16.3.2005ರ ನಿಬಂಧನೆ (ಅ)ನ್ನು ಅಡಿಲಿಸುವ ಮೂಲಕ ಸರ್ಕಾರದ ತಾತ್ವಿಕ ಅನುಮೋದನೆಯನ್ನು ನೀಡಲಾಗಿದೆ.

ಮುಂದುವರೆದು ಸಹ ವಿದ್ಯುತ್ ಘಟಕ ಸ್ಥಾಪನೆಗೆ ಹಾಗೂ ಡಿಸ್ಟಿಲರಿ ಘಟಕ ಸ್ಥಾಪನೆಗೆ ಸಂಬಂಧಪಟ್ಟ ಇಲಾಖೆಗಳಿಂದ ನಿಯಮಾನುಸಾರ ಅನುಮತಿ ಪಡೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಆನಂದಕುಮಾರ್**

ಪಿ.ಆರ್. 1440

ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ:** ಕರ್ನಾಟಕ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಸಂಗೂರು, ಹಾವೇರಿ ಜಿಲ್ಲೆ, ಇದರ 2004-05 ಮತ್ತು 2005-06ನೇ ಸಾಲಿನ ವಾರ್ಷಿಕ ಮಹಾಸಭೆಗಳನ್ನು ನಡೆಸಲು ಅವಧಿಯನ್ನು 15 ನವೆಂಬರ್ 2006 ರವರೆಗೆ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1. ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಪತ್ರ ಸಂಖ್ಯೆ ಡಿಎಸ್‌ಕೆ/ ಇಎಸ್‌ಟಿಎಸ್/90/2003-04 ದಿನಾಂಕ:1.9.2006
2. ಅಧ್ಯಕ್ಷರು, ಕರ್ನಾಟಕ ಸಹಕಾರಿ ಸಕ್ಕರೆ ಕಾರ್ಖಾನೆ ಇವರ ಪತ್ರ ಸಂಖ್ಯೆ: ಕಸಸಕಾನಿ/ಆಡಳಿತ/652/ವಮಸ/2006-07, ದಿನಾಂಕ:29.9.2006.

**ಪ್ರಸ್ತಾವನೆ:**

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಮೇಲೆ ಓದಲಾದ (1)ರ ಪ್ರಸ್ತಾವನೆಯಲ್ಲಿ, ಕರ್ನಾಟಕ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಸಂಗೂರ ಹಾವೇರಿ ಜಿಲ್ಲೆ ಇದರ 2004-05 ಹಾಗೂ 2005-06ನೇ ಸಾಲಿನ ವಾರ್ಷಿಕ ಮಹಾ ಸಭೆಗಳನ್ನು ನಡೆಸಲು ದಿನಾಂಕ:30.9.2006ರವರೆಗೆ ಕಾಲಾವಕಾಶ ವಿಸ್ತರಿಸಿ ಆದೇಶಿಸಲಾಗಿತ್ತು, ಹಾಗೂ 2004-05 ಮತ್ತು 2005-06ನೇ ಸಾಲಿನ ವಾರ್ಷಿಕ ಮಹಾಸಭೆಗಳನ್ನು ನಡೆಸಲು ಕಾರ್ಖಾನೆಯಲ್ಲಿ ಹಣಕಾಸಿನ ಅನಾನುಕೂಲವಿರುವುದರಿಂದ ಎರಡೂ ಸಾಲುಗಳ ಮಹಾಸಭೆಗಳನ್ನು ನಡೆಸಲು 6 ತಿಂಗಳ ಅವಧಿಗೆ ಮುಂದೂಡುವ ಕುರಿತು ಕಾಲಾವಕಾಶ ನೀಡಲು ಕೋರಿ ಕಾರ್ಖಾನೆಯ ಆಡಳಿತ ಮಂಡಳಿಯ ದಿನಾಂಕ:22.7.2006ರ ಠರಾವಿನೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುವುದಾಗಿ, ಹಾಗೂ ಪ್ರಸ್ತುತ ಕಾರ್ಖಾನೆಯಲ್ಲಿ ಹಣಕಾಸಿನ ಮುಗ್ಗಟ್ಟು ಇರುವುದರಿಂದ 2004-05 ಮತ್ತು 2005-06ನೇ ಸಾಲುಗಳ ವಾರ್ಷಿಕ ಮಹಾ ಸಭೆಗಳನ್ನು ದಿನಾಂಕ:31.3.2007ರವರೆಗೆ ಅವಧಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 121ರಡಿ ವಿಸ್ತರಿಸುವಂತೆ ಕೋರಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, 2004-05 ಮತ್ತು 2005-06ನೇ ಸಾಲುಗಳ ವಾರ್ಷಿಕ ಮಹಾ ಸಭೆಗಳನ್ನು ದಿನಾಂಕ:30.9.2006 ರೊಳಗೆ ನಡೆಸುವಂತೆ ಸರ್ಕಾರದ ಪತ್ರ ಸಂ: ಸಇ 207 ಸಸಕಾ 2006, ದಿನಾಂಕ:28.9.2006ರಲ್ಲಿ ಆದೇಶಿಸಲಾಗಿತ್ತು.

ಅಧ್ಯಕ್ಷರು, ಕರ್ನಾಟಕ ಸಹಕಾರಿ ಸಕ್ಕರೆ ಕಾರ್ಖಾನೆ (ನಿ), ಸಂಗೂರು, ಹಾವೇರಿ ಜಿಲ್ಲೆ, ಇವರು ಮೇಲೆ ಓದಲಾದ (2)ರ ಪತ್ರದಲ್ಲಿ, ಕಾರ್ಖಾನೆಯ ವಾರ್ಷಿಕ ಮಹಾಸಭೆ ನಡೆಸುವ ಬಗ್ಗೆ ಸೂಕ್ತ ತಯಾರಿ ಮಾಡಿಕೊಳ್ಳಲು ಸಾಧ್ಯವಾಗಿರುವುದಿಲ್ಲ. ಮತ್ತು ಸಹಕಾರ ಸಂಘಗಳ ಕಾನೂನು ಹಾಗೂ ನಿಯಮಗಳನ್ವಯ ಸದಸ್ಯರಿಗೆ ಮಹಾಸಭೆಯ ನೋಟೀಸು ಸಹ ನೀಡಲು ಕಾಲಾವಕಾಶವಿರುವುದಿಲ್ಲ ಮತ್ತು ಕಾರ್ಖಾನೆಯ ಕಾರ್ಮಿಕರಿಗೆ 11 ತಿಂಗಳ ವೇತನ ಬಾಕಿ ಪಾವತಿಸಬೇಕಾಗಿರುವುದರಿಂದ ಹಾಗೂ 3 ತಿಂಗಳ ವಿದ್ಯುತ್ ಬಿಲ್ ಬಾಕಿ ಪಾವತಿಸಬೇಕಾಗಿರುವ ಕ್ಲಿಷ್ಟಕರ ಆರ್ಥಿಕ ಪರಿಸ್ಥಿತಿಯಲ್ಲಿರುವ ಕಾರಣ ಪತ್ರ ಸಂಖ್ಯೆ:ಸಇ 207 ಸಸಕಾ 2006, ದಿನಾಂಕ:28.9.2006ನ್ನು ಪುನರ್ ಪರಿಶೀಲಿಸಿ ಕಾರ್ಖಾನೆಗೆ 2004-05 ಹಾಗೂ 2005-06ನೇ ಸಾಲಿನ ವಾರ್ಷಿಕ ಮಹಾಸಭೆಗಳನ್ನು ನಡೆಸಲು ದಿನಾಂಕ:31.3.2007ರವರೆಗೆ ಕಾಲಾವಕಾಶ ನೀಡಲು ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಅದರಂತೆ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಇ 207 ಸಸಕಾ 2006, ಬೆಂಗಳೂರು, ದಿನಾಂಕ: 11ನೇ ಅಕ್ಟೋಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು, ಕರ್ನಾಟಕ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಸಂಗೂರು, ಹಾವೇರಿ ಜಿಲ್ಲೆ ಇದರ 2004-05 ಮತ್ತು 2005-06ನೇ ಸಾಲಿನ ವಾರ್ಷಿಕ ಮಹಾಸಭೆಗಳನ್ನು ನಡೆಸಲು ದಿನಾಂಕ:15.11.2006ರವರೆಗೆ ಕಾಲಾವಕಾಶ ನೀಡಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಗಳು ಈ ಕೆಳಗಿನ ಮಾರ್ಪಾಟುಗಳೊಂದಿಗೆ ಅನ್ವಯವಾಗುತ್ತದೆ ಎಂದು ನಿರ್ದೇಶಿಸುತ್ತದೆ. ಎಂದರೆ

**27ರ ಪ್ರಕರಣದಲ್ಲಿ:** 27ನೇ ಪ್ರಕರಣದ ಉಪ ಪ್ರಕರಣ (1) ಪರಂತುಕದಲ್ಲಿನ ಆರು ತಿಂಗಳು ಎಂಬ ಪದಗಳಿಗೆ ಬದಲಾಗಿ ಹದಿಮೂರು ತಿಂಗಳು ಹದಿನೈದು ದಿವಸ ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ 27(1)ಕ್ಕೆ ಮಾಡಿದ ಮಾರ್ಪಾಡು ದಿನಾಂಕ:15.11.2006ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1)ಕ್ಕೆ ಪ್ರಕರಣದ ಉಪಬಂಧಕಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರಪುರಕರ್ ವೆಂಕಟೇಶ್**

ಪಿ.ಆರ್. 1494

ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ.

## ವಸತಿ ಸಚಿವಾಲಯ

**ವಿಷಯ:** ಬಳ್ಳಾರಿ ಜಿಲ್ಲೆ, ಕೂಡ್ಲಗಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ವಇ/42/ಹೆಚ್ಎಎಂ/1998, ದಿನಾಂಕ:10.4.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಬಳ್ಳಾರಿ ಜಿಲ್ಲೆ, ಕೂಡ್ಲಗಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ. ವಇ /135/ಹೆಚ್ಎಎಸ್/ 2006, ಬೆಂಗಳೂರು, ದಿನಾಂಕ:3ನೇ ಅಕ್ಟೋಬರ್ 2006**

ಮೇಲ್ಕಂಡ ಸಂದರ್ಭದಲ್ಲಿ ಬಳ್ಳಾರಿ ಜಿಲ್ಲೆ, ಕೂಡ್ಲಗಿ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

1. ಶ್ರೀ ಬಿ. ಶಿವಕೃಷ್ಣ, ತಂದೆ:ಬಿ. ಬಸವಪ್ಪ — ಸದಸ್ಯರು
   ಬೆಂಗಳೂರು ರಸ್ತೆ, ಕೂಡ್ಲಗಿ, ಬಳ್ಳಾರಿ ಜಿಲ್ಲೆ.
2. ಶ್ರೀ ಕೆ. ನಾಗಪ್ಪ, ತಂದೆ:ಕೆ. ದುರ್ಗಪ್ಪ — ಸದಸ್ಯರು
   ರಾಮನಗರ, 6ನೇ ವಾರ್ಡ್, ಕೂಡ್ಲಗಿ, ಬಳ್ಳಾರಿ ಜಿಲ್ಲೆ
3. ಶ್ರೀ ಜೆ. ಕೊಟ್ರೇಷನ್ ಬಿನ್. ಸಣ್ಣ ವೀರಪ್ಪ — ಸದಸ್ಯರು
   214ನೇ ವಾರ್ಡ್, ಕುಂಬಾರ ಓಣಿ, ಕೂಡ್ಲಗಿ, ಬಳ್ಳಾರಿ ಜಿಲ್ಲೆ
4. ಶ್ರೀಮತಿ ಇಷ್ರಾತ್ ಕೋಂ. ಮಹಮ್ಮದ್ ರಫಿ — ಸದಸ್ಯರು
   13ನೇ ವಾರ್ಡ್, ರಾಮನಗರ, ಕೂಡ್ಲಗಿ, ಬಳ್ಳಾರಿ ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1506

**ಎಸ್. ಇಂದುಮತಿ**

ಪೀಠಾಧಿಕಾರಿ-2, ವಸತಿ ಇಲಾಖೆ.

**URBAN DEVELOPMENT SECRETARIAT**

**Sub:** Development of New Integrated Townships in the Bangalore Metropolitan Region (BMR) - Reg.

**Read:** 1. Letter No. BMRDA/ Sat. Town-01 /2005-06 dated 23.6.2006 of the Metropolitan Commissioner, BMRDA.

2. Proceedings of the meeting held under the chairmanship of Hon'ble Chief Minister on 23-9-2006.

**Preamble**

1. In order to preserve and improve the quality of life for the citizens within the Bangalore Metropolitan Area (BMA) and at the same time to cater to needs of the rapidly increasing population, it is felt necessary to take up development of new integrated urban settlements in Bangalore Metropolitan Region (BMR) that would relieve the pressure on BMA and facilitate balanced urban growth. In this context, the Bangalore Metropolitan Region Development Authority (BMRDA) has proposed the following set of major activities to solve these problems in a planned manner:-
   a. Development of a series of "integrated townships" focused on one or more economic activity, providing for complete work-home relationship;
   b. Development of Satellite Towns Ring Road (STRR), Intermediate Ring Road (IRR) and the Radial Roads; and
   c. Preparation of Interim Master Plans for the various urbanisable blocks in the Metropolitan Region.
2. For the development of the "new integrated townships", the BMRDA conducted an inter-departmental survey of the Bangalore Metropolitan Region involving the Departments of Revenue, Industries & Commerce, Ecology & Environment, PWD, Karnataka State Pollution Control Board and the concerned Local Planning Authorities. This led to identification of following five potential locations:-

[Approximate Area in Acres]

| Sl. No. | Location of the Townships | Private Lands | Govt. Lands | Total |
|---|---|---|---|---|
| 1 | Nandagudi Hobli, Hosakote Taluk | 13762 | 4745 | 18507 |
| 2 | Kasaba Hobli, Ramanagaram Taluk | 3621 | 392 | 4013 |
| 3 | Bidadi Hobli, Ramanagaram Taluk | 6959 | 2725 | 9684 |
| 4 | Solur Hobli, Magadi Taluk | 9661 | 2864 | 12525 |
| 5 | Sathanooru Hobli, Kanakapura Taluk | 5891 | 10341 | 16232 |
| | **Total** | **39894** | **21067** | **60961** |

The locations and areas for the proposed townships were identified based on the following considerations:

a. Least displacement to human habitations.
b. Least disturbance to forests and water bodies.
c. Least acquisition of valuable agricultural lands.
d. Lower cost for lands.
e. Far from existing developed locations.
f. Good connectivity particularly in the wake of the proposed BMR-Satellite Towns Ring Road, BMR-Intermediate Ring Road and Radial Roads.

3. **Highlights of the Proposed Townships Project**

i. The proposed townships will be independent, self-contained and eco-friendly human settlements. They will be based on integrated land use concepts, centering around one or more specific economic activity with concomitant residential components aimed at promoting work-home relationship. Further, it is planned to have connectivity between the townships and the proposed

BMR Ring Roads as also access to the National Highways, State Highways, Railway Stations and the new International Airport.

ii. The townships will be developed with proper infrastructure facilities and amenities based on modern technology and environmentally friendly concepts. The focus will be towards making them self contained for all activities.

iii. The townships are proposed in the limits of 85 villages having population of about 79,000. In the course of developing the township, it is proposed to integrate these villages in a manner that will ensure conservation of local heritage and also in a manner that is economically and socially viable for the inhabitants. The resource for this will be raised from the revenue generated from the township projects, in conjunction with the available funding from developmental programmes of the various Government and Non-Government agencies and institutions.

iv. Project Implementation Period is expected to be 2 years and realisation Period, 5 years.

4. The Executive Committee of BMRDA has deliberated upon the details of the Townships Project and has submitted proposal to take up development of the five township projects with the first township at Bidadi.

The above proposals have been examined and the following orders are issued.

**Government Order No: UDD 97 BMR 2006, Bangalore Dated 18th October 2006**

Government hereby approve the proposals for Development of five integrated townships in the Bangalore Metropolitan Region (BMR) by the BMRDA and permit the BMRDA to develop the first Township in Bidadi Hobli as a pilot project. The list of villages proposed for each township is indicated at Annexure-1.

Government also approve the following guidelines in this regard:

**I. BMRDA Integrated Townships:-**

1. **Land Acquisition**

a. The Karnataka Industrial Areas Development Board (KIADB) shall undertake land acquisition for the BMRDA township projects for and on behalf of the BMRDA and shall levy a service charge of 3% [three percent only] for handling land acquisition.

b. The KIADB shall commence the land acquisition proceedings for the Bidadi Township project immediately with an initial advance deposit of Rs. 5 (five) crore from BMRDA towards land acquisition compensation. BMRDA shall extend additional deposit to KIADB soon after securing the bid amounts from the selected Private Developer. This Rs. 5 crore corpus with KIADB shall be replenished from time to time, depending upon the progress of land acquisition and actual payment of compensation to farmers.

c. Given the magnitude of the township projects and ring road projects, it appears desirable to bring in suitable amendments to the BMRDA Act, 1985 for enabling the BMRDA to acquire land for its projects. After such amendments come into place, the options of BMRDA undertaking direct land acquisition as well as acquisition through the KIADB under the provisions of Karnataka Industrial Areas Development Act, 1966 would be utilised, depending upon the time schedule and administrative convenience.

d. The Government lands in the designated township areas shall be transferred to the BMRDA on terms that are consistent with provisions of the Land Grant Rules applicable to such cases.

e. Land would be released to the Private Developer by BMRDA in installments, to ensure that the project objectives are achieved in the manner envisaged.

f. Transfer of lands to the Private Partner will be on Lease cum Sale basis, and the Lease will be converted into Sale for the parcels of lands that are adequately developed in terms of the approved Development Plan.

**2. The Bidding Process**

a. The Metropolitan Commissioner, BMRDA is permitted to invite Expression of Interest (EOI), Requests for Qualification (RFQ) and Requests for Project Proposals (RFP) through an open global tendering process for selection of the Private Partner. Selection would be based on technical-cum-financial bids. The Private Partner shall invest either on stand alone basis or through a consortium.

b. The selected Private Partner shall be permitted to deposit the bid amount with the BMRDA in stages/ installments as may be prescribed by the Authority.

c. The business model proposed is that the private sector developer deposits funds with BMRDA towards:

   (i) Developed bulk land cost comprising:

      (a) Land acquisition cost;

      (b) External infrastructure cost; and

   (ii) Regional Development Premium.

   Items (i)a and (i)b shall be common for all bidders whereas item (ii) shall be the deciding factor among the technically qualified bidders.

d. Participation of foreign firms would be subject to the relevant norms/ regulations relating to Foreign Direct Investment (FDI).

**3. Town Planning Regulations**

a. The proposed townships shall be declared as "Local Planning Areas (LPAs)" and the BMRDA shall be the "Planning Authority" for these LPAs under the Karnataka Town & Country Planning Act, 1961. The LPAs would prescribe zonal planning guidelines and frame the required regulations keeping in view the broad guidelines indicated in Annexure-2. The Private Partner would prepare Draft Master Plan for the township in accordance with the Regulations and obtain approval from the LPA. Developments in the township would be regulated by the LPA in accordance with the approved Master Plan.

b. The Private Partner shall finance and develop the internal infrastructure as per the approved Master Plan / Zonal Regulations which will include water supply & sanitation, power supply, telecommunication including broadband and internal road network within the township. The standards for these would be as specified by the BMRDA. The Private Partner shall secure firm commitments from agencies such as BWSSB, KUWS & DB etc. Likewise, for power requirements, either a captive plant or arrangements to draw power from an existing supply system on the basis of a firm commitment is required of the developer.

c. The Private Partner shall also make detailed arrangements for solid and liquid waste management as also the sanitation arrangements for the proposed township. BMRDA shall, in consultation with the Karnataka Compost Development Corporation Ltd. and other competent agencies, provide assistance to the Private Partner for development of bulk solid waste management facility.

d. The Private Partner shall carve out parcels of land for different usage classifications and carry out further developments / construction either directly or through further sale / lease to downstream developers.

e. BMRDA would function as the umbrella organization to oversee implementation of the projects and also help create appropriate external infrastructure linkages such as the Intermediate Ring Roads [IRR], Satellite Town Ring Roads [STRR], Mass Rapid Transit [MRT] links, Bulk Power / Water supply / Drainage & Waste Management infrastructure etc.

**4. Economic Integration of the Land Losers and Local Residents**

An innovative and inclusive approach will be evolved to integrate the land losers / local residents into the mainstream of economic activities in the new townships. Apart from development of industrial estates that will facilitate investment by entrepreneurs for different types of industrial activities appropriate to the area, the private partner shall be required to incorporate a certain proportion of social housing for economically weaker sections and lower income groups at reasonable prices. No land loser would be forced to relocate beyond the township.

**5. Regional Development**

BMRDA shall utilise the receipts from the "Regional Development Premium" for the overall development of the Bangalore Metropolitan Region, including integrated and comprehensive development of the towns and villages located on BMR Ring Roads and around the BMRDA Townships and for development of forestry, in conjunction with the resources available developmental programmes of the various Government and Non-Government agencies and institutions.

